# ಅಧ್ಯಯನ ಪ್ರಬಂಧ

# ಪ್ರಸನ್ನ ಅವರ ನಾಟಕಗಳಲ್ಲಿ ಶಕ್ತಿರಾಜಕಾರಣದ ನೆಲೆಗಳು

*ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ನೆ ಸಾಲಿನ*
*ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ*

**ಭಾರತಿ**

*ಸಂಶೋಧನ ವಿದ್ಯಾರ್ಥಿ*

**ಡಾ.ಟಿ.ವೆಂಕಟೇಶಮೂರ್ತಿ**

*ಮಾರ್ಗದರ್ಶಕರು*







**ಕಾವ್ಯಮಂಡಲ**

೧೩/೧೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು–೫೬೦ ೦೦೪

**ಅಧ್ಯಯನಾಂಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ–೫೮೩ ೨೭೬

# ದೃಢೀಕರಣ ಪತ್ರ

**ಭಾರತಿ** ಇವರು **"ಪ್ರಸನ್ನ ಅವರ ನಾಟಕಗಳಲ್ಲಿ ಶಕ್ತಿರಾಜಕಾರಣದ ನೆಲೆಗಳು"** ಎಂಬ ಶೀರ್ಷಿಕೆಯ ಲಘು ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಾಂಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಲಘು ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ.ಟಿ. ವೆಂಕಟೇಶಮೂರ್ತಿ)**
ಮಾರ್ಗದರ್ಶಕರು,
ಆಯ್ಕೆಶ್ರೇಣಿ ಉಪನ್ಯಾಸಕರು,
ಕನ್ನಡ ವಿಭಾಗ, ಬಿ.ಇ.ಎಸ್. ಸಂಜೆ ಕಾಲೇಜು,
೪ನೇ ಬ್ಲಾಕ್, ಜಯನಗರ
ಬೆಂಗಳೂರು–೫೬೦ ೦೧೧.

ದಿನಾಂಕ : ೨೦:೧೦:೨೦೦೮
ಸ್ಥಳ : ಬೆಂಗಳೂರು

# ಪ್ರಮಾಣ ಪತ್ರ

**"ಪ್ರಸನ್ನ ಅವರ ನಾಟಕಗಳಲ್ಲಿ ಶಕ್ತಿರಾಜಕಾರಣದ ನೆಲೆಗಳು"** ಎಂಬ ಶೀರ್ಷಿಕೆಯ ಲಘು ಪ್ರಬಂಧವನ್ನು ಡಾ.ಟಿ.ವೆಂಕಟೇಶಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಾಂಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಲಘು ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಭಾರತಿ)

ಸಂಶೋಧಕಿ
ಎಂ.ಫಿಲ್. ವಿದ್ಯಾರ್ಥಿನಿ,
ಕಾವ್ಯಮಂಡಲ,
೧೩/೧೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-೫೬೦ ೦೦೪

ದಿನಾಂಕ : ೨೦.೧೦.೨೦೦೮
ಸ್ಥಳ : ಬೆಂಗಳೂರು

# ಪರಿವಿಡಿ

ಪು.ಸಂ.

# ಅಧ್ಯಯನದ ಸ್ವರೂಪ, ಮಹತ್ವ ಮತ್ತು ವ್ಯಾಪ್ತಿ

ಗ್ರೀಕ್, ಇಂಗ್ಲಿಷ್, ಸಂಸ್ಕೃತ ನಾಟಕಗಳಿಗಿರುವಂತೆ ಕನ್ನಡ ನಾಟಕಕ್ಕೆ ಪ್ರಾಚೀನ ಪರಂಪರೆ ಇಲ್ಲದಿದ್ದರೂ ಕನ್ನಡ ನಾಟಕ ಪರಂಪರೆಗೆ ನೂರು ವರ್ಷಗಳ ಇತಿಹಾಸವಿದೆ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಇಲ್ಲಿಯತನಕ ಬೆಳೆದು ಬಂದಿರುವ ಆಧುನಿಕ ಕನ್ನಡ ನಾಟಕ ಪರಂಪರೆಯು ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಜಾನಪದ ಮುಂತಾದ ನೆಲೆಗಳಲ್ಲಿ ಹರಡಿಕೊಂಡಿದೆ. ಹಾಗೆಯೇ ಸಮಕಾಲೀನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ರಾಜಕಾರಣಗಳು ಕನ್ನಡ ನಾಟಕಗಳಿಗೆ ವಸ್ತುವಾಗಿವೆ. ಜಾತಿ, ಧರ್ಮ, ಕುಟುಂಬ, ಪುರುಷಾಧಿಕಾರ, ಪ್ರಭುತ್ವ, ಪುರೋಹಿತಶಾಹಿ, ವಸಾಹತುಶಾಹಿ, ದೇವರು, ಮಠಮಾನ್ಯ ಮೊದಲಾದ ಶಕ್ತಿರಾಜಕಾರಣದ ಅಧಿಕಾರ ಕೇಂದ್ರಗಳ ನಡುವಿನ ಹಲವು ವೈರುಧ್ಯಗಳು ಹಾಗೂ ಬಿಕ್ಕಟ್ಟುಗಳು ಕನ್ನಡ ನಾಟಕಗಳ ಪ್ರಮುಖ ಬಿತ್ತಿಯಾಗಿವೆ.

ಭಾರತೀಯ ಸಮಾಜದ ಜಾತಿ-ಧರ್ಮಗಳ ಶ್ರೇಣೀಕರಣ, ಸಾಮಾಜಿಕ ಶ್ರೇಣೀಕರಣ, ಪ್ರಭುತ್ವದ ಶ್ರೇಣೀಕರಣ ಮೊದಲಾದ ತಾರಮ್ಯಗಳು ಶಕ್ತಿರಾಜಕಾರಣಕ್ಕೆ ಹಾಗು ಸಾಂಸ್ಕೃತಿಕ ಯಾಜಮಾನ್ಯಗಳಿಗೆ ಎಡೆಮಾಡಿಕೊಟ್ಟಿವೆ. ಇದರಿಂದ ಸಮಾಜದಲ್ಲಿ ಮೇಲು-ಕೀಳು, ವೈದಿಕ-ಅವೈದಿಕ, ದೇಶೀ-ಅನ್ಯ, ಕಪ್ಪು-ಬಿಳುಪು, ಮೇಲುಜಾತಿ-ಕೆಳಜಾತಿ, ಆಳುವ-ಆಳಿಸಿಕೊಳ್ಳುವ, ಗಂಡು-ಹೆಣ್ಣು, ಪರಂಪರೆ ಮತ್ತು ಆಧುನಿಕತೆ ಎಂಬ ಮೊದಲಾದ ಅವಳಿ ವೈರುಧ್ಯಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಈ ಎಲ್ಲಾ ಬಗೆಯ ಅಧಿಕಾರ ಕೇಂದ್ರಗಳ ಶಕ್ತಿರಾಜಕಾರಣದ ನೆಲೆಗಳನ್ನು ಕನ್ನಡ ನಾಟಕಗಳು ಬಹಳ ಸಮರ್ಥವಾಗಿ ಬಿಚ್ಚಿಡುವಲ್ಲಿ ಯಶಸ್ವಿಯಾಗಿವೆ.

ಸಂಸ, ಕೈಲಾಸಂ, ಮಾಸ್ತಿ, ಕುವೆಂಪು, ಶ್ರೀರಂಗ, ಗಿರೀಶ್ ಕಾರ್ನಾಡ್, ಪಿ.ಲಂಕೇಶ್, ಚಂದ್ರಶೇಖರ ಕಂಬಾರ, ಎಚ್.ಎಸ್.ಶಿವಪ್ರಕಾಶ್ ಮೊದಲಾದ ನಾಟಕಕಾರರು ಶಕ್ತಿರಾಜಕಾರಣದ ವಿವಿಧ ಮುಖಗಳನ್ನು ತಮ್ಮ ಕೃತಿಗಳಲ್ಲಿ ಚರ್ಚಿಸಿದ್ದಾರೆ. ಹಾಗೆಯೇ ಕನ್ನಡದ ಪ್ರಮುಖ ನಾಟಕಕಾರರಲ್ಲಿ ಒಬ್ಬರಾದ ಪ್ರಸನ್ನ ಅವರ ನಾಟಕಗಳಲ್ಲಿ ಭಾರತೀಯ ಸಮಾಜದ ಆಂತರಿಕ ಹಾಗು ಬಾಹ್ಯ ಶಕ್ತಿರಾಜಕಾರಣದ ಹಲವು ಮಜಲುಗಳನ್ನು, ಅದರ ನಿಯಂತ್ರಣಗಳನ್ನು ಸಮಕಾಲೀನ ನೆಲೆಯಲ್ಲಿ ಪುನರ್ ಪರಿಶೋಧಿಸಿಕೊಳ್ಳುವುದು ಈ ಅಧ್ಯಯನದ ಪ್ರಮುಖ ಬಿತ್ತಿಯಾಗಿದೆ. ಪ್ರಸನ್ನ ಅವರ 'ತದ್ರೂಪಿ'(೧೯೮೨), 'ದಂಗೆಯ ಮುಂಚಿನ ದಿನಗಳು'(೧೯೮೧), ಮಹಿಮಾಪುರ'(೧೯೮೭), 'ಜಂಗಮದ ಬದುಕು'(೨೦೦೦),

'ಉಲಿ'(೧೯೯೭) ಈ ಪ್ರಾತಿನಿಧಿಕ ನಾಟಕ ಪಠ್ಯಗಳನ್ನು ಸಮಕಾಲೀನ ಶಕ್ತಿರಾಜಕಾರಣದ ವಿಭಿನ್ನ ನೆಲೆಗಳಲ್ಲಿ ವಸ್ತು ಕೇಂದ್ರಿತವಾಗಿ ವಿವಿಧ ಅಧ್ಯಾಯಗಳಲ್ಲಿ ವಿಶ್ಲೇಷಿಸಿಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಮೊದಲನೆಯ ಅಧ್ಯಾಯದಲ್ಲಿ **ಶಕ್ತಿರಾಜಕಾರಣದ ನೆಲೆಗಳು : ಒಂದು ತಾತ್ವಿಕ ಪ್ರವೇಶ** ಎಂಬ ಶೀರ್ಷಿಕೆಯಡಿಯಲ್ಲಿ ಮೈಕಲ್ ಫ್ಯೂಕೋ, ಎಡ್ವರ್ಡ್ ಸೈದ್, ಅಂಟೋನಿಯೋ ಗ್ರಾಮ್ಷಿ, ಮೊದಲಾದ ಜಾಗತಿಕ ಚಿಂತಕರ ಸಿದ್ಧಾಂತಗಳನ್ನು ಈ ಅಧ್ಯಯನದಲ್ಲಿ ತಾತ್ವಿಕವಾಗಿ ಚರ್ಚಿಸಲಾಗುತ್ತದೆ. ಶಕ್ತಿರಾಜಕಾರಣದ ವಿವಿಧ ಮುಖಗಳನ್ನು ಅವರ ಸಿದ್ಧಾಂತದ ವಿಸ್ತೃತ ವ್ಯಾಪ್ತಿಯನ್ನು ಹಾಗು ಬಗೆ ಬಗೆಯ ನಿಯಂತ್ರಣಗಳನ್ನು ಸಮಗ್ರವಾಗಿ ಈ ಅಧ್ಯಯನ ವಿವರಿಸಿಕೊಳ್ಳಲು ಯತ್ನಿಸುತ್ತದೆ.

**ಸರ್ವಾಧಿಕಾರದ ಒಳ-ಹೊರಗುಗಳ ಸಂಘರ್ಷ** ಎಂಬ ಎರಡನೆಯ ಅಧ್ಯಾಯವು ಸರ್ವಾಧಿಕಾರಿ ಪ್ರಭುತ್ವ ಮತ್ತು ಸ್ಥಳೀಯ ಜಗತ್ತುಗಳ ನಡುವಿನ ಮುಖಾಮುಖಿ, ಪ್ರಭುತ್ವದ ಸಂಚಿನ ರಾಜಕಾರಣ, ಕುಟಿಲನೀತಿಗಳು ಮೊದಲಾದ ಸೂಕ್ಷ್ಮ ಒಳಸಂಘರ್ಷಗಳನ್ನು ವಿಶ್ಲೇಷಿಸುತ್ತದೆ. ಸರ್ವಾಧಿಕಾರಿ ಪ್ರಭುತ್ವದ ವಿರುದ್ಧ ಜನರ ಸುಪ್ತ ಹಾಗು ನೇರ ಪ್ರತಿಭಟನೆ, ಹೋರಾಟ, ಚಳುವಳಿ ಹೀಗೆ ತಂತ್ರ-ಪ್ರತಿತಂತ್ರಗಳ ರಾಜಕಾರಣದ ಸ್ವರೂಪವನ್ನು ~~ಈ ಅಧ್ಯಾಯ~~ ಚರ್ಚಿಸುತ್ತದೆ. ಜೊತೆಗೆ ಸಮಕಾಲೀನ ರಾಜಕೀಯ, ಸಾಮಾಜಿಕ, ಆರ್ಥಿಕ ಬಿಕ್ಕಟ್ಟುಗಳ ಸಂದರ್ಭದ ಹಿನ್ನೆಲೆಯಲ್ಲಿ ಪ್ರಸನ್ನ ಅವರ 'ತದ್ರೂಪಿ' ನಾಟಕವನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಲಾಗುತ್ತದೆ.

**ವಸಾಹತುಶಾಹಿ ಧೋರಣೆ ಮತ್ತು ಸ್ಥಳೀಯತೆಯ ಪ್ರಶ್ನೆ** ಎಂಬ ಮೂರನೆ ಅಧ್ಯಾಯದಲ್ಲಿ ವಸಾಹತುಶಾಹಿ ಪ್ರಭುತ್ವದ ಆಕ್ರಮಣನೀತಿ, ಆಡಳಿತಕ್ರಮ, ಹುನ್ನಾರಗಳು, ಬೌದ್ಧಿಕ ನಿಯಂತ್ರಣ ಮುಂತಾದವುಗಳನ್ನು ಚರ್ಚಿಸಿಕೊಳ್ಳಬಹುದಾಗಿದೆ. ಜೊತೆಗೆ ಅವು ದೇಶೀ ರಾಜರ ಮೇಲೆ ಮತ್ತು ಸ್ಥಳೀಯ ಜನಸಮುದಾಯಗಳ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ಪರಿಶೀಲಿಸಬಹುದಾಗಿದೆ. ಅಷ್ಟೇ ಅಲ್ಲದೆ ವಸಾಹತುಶಾಹಿ ಪ್ರಭುತ್ವದ ಆಕ್ರಮಣಕ್ಕೆ ಸ್ಥಳೀಯ ರಾಜವಂಶಗಳ ಶಿಥಿಲತೆಗಳೂ ಹೇಗೆ ಕಾರಣವಾದವು ಎಂಬುದನ್ನು ಪ್ರಸನ್ನ ಅವರ 'ದಂಗೆಯ ಮುಂಚಿನ ದಿನಗಳು' ನಾಟಕದ ಹಿನ್ನೆಲೆಯಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ.

**ಪರಂಪರೆ ಮತ್ತು ಆಧುನಿಕತೆಗಳ ತಾಕಲಾಟ** ಎಂಬ ನಾಲ್ಕನೆಯ ಅಧ್ಯಾಯದಲ್ಲಿ ಪುರೋಹಿತಶಾಹಿ, ದೇವಾಲಯ, ಜಾತಿ, ಧರ್ಮ, ಮಠಕೇಂದ್ರಿತ ವ್ಯವಸ್ಥೆ ಮೊದಲಾದ ಪಾರಂಪರಿಕ ಮೌಲ್ಯಗಳ ಜೊತೆಗೆ ಆಧುನಿಕರಣ, ನಗರೀಕರಣ, ಖಾಸಗೀಕರಣ, ಜ್ಞಾನಾಧಿಕಾರ, ಆಕ್ರಮಣಶೀಲತೆ ಮೊದಲಾದ ಆಧುನಿಕ ಮೌಲ್ಯಗಳ ನಡುವಿನ ತಾಕಲಾಟ, ವೈರುದ್ಯ ಹಾಗು ಬಿಕ್ಕಟ್ಟುಗಳನ್ನು ಪ್ರಸನ್ನ ಅವರ 'ಮಹಿಮಾಪುರ' ನಾಟಕದ ಹಿನ್ನೆಲೆಯಲ್ಲಿ ಚರ್ಚಿಸಲಾಗುತ್ತದೆ.

**ದಾಂಪತ್ಯದ ವಿಘಟನೆ : 'ಜಂಗಮದ ಬದುಕು'** ಎಂಬ ಐದನೆಯ ಅಧ್ಯಾಯದಲ್ಲಿ ಗಂಡು-ಹೆಣ್ಣಿನ ಸಂಬಂಧ, ಪುರುಷಾಧಿಕಾರ, ಲೈಂಗಿಕ ರಾಜಕಾರಣ, ಶೋಷಣೆ, ಸ್ತ್ರೀ ಸಂವೇದನೆ, ಚಹರೆ ಮತ್ತು ಅಸ್ತಿತ್ವದ ಪ್ರಶ್ನೆ, ಧಾರ್ಮಿಕ ಶೋಷಣೆಯ ವಿವಿಧ ಮುಖಗಳು ಹಾಗೂ ವ್ಯಕ್ತಿಯ ಸೂಕ್ಷ್ಮ ಒಳಸಂಘರ್ಷಗಳನ್ನು ಇಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ. ಹಾಗೆಯೇ ಜೀವಪರ-ಜೀವವಿರೋಧಿ, ನೈತಿಕತೆ-ಅನೈತಿಕತೆ ಮತ್ತು ಕೌಟುಂಬಿಕ ದ್ವಂದ್ವ ಹಾಗೂ ಬಿಕ್ಕಟ್ಟುಗಳನ್ನು ಪ್ರಸನ್ನ ಅವರ 'ಜಂಗಮದ ಬದುಕು' ನಾಟಕದ ಹಿನ್ನೆಲೆಯಲ್ಲಿ ಪರಿಶೀಲಿಸಲಾಗುತ್ತದೆ.

**ಧರ್ಮದ ರಾಜಕಾರಣ** ಎಂಬ ಆರನೆಯ ಅಧ್ಯಾಯದಲ್ಲಿ ಆಧುನಿಕ ಸಂದರ್ಭದಲ್ಲಿ ಧರ್ಮದ ಭೌದ್ಧಿಕ ನಿಯಂತ್ರಣ, ತೊಳಲಾಟಗಳ ಜೊತೆಗೆ ಧರ್ಮದ ಎಲ್ಲಾ ರೀತಿಯ ಎಲ್ಲೆಗಳನ್ನು ಮೀರಿ ತಮ್ಮದೇ ಆದ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳಲು ಹೊರಟಿರುವ ಆಧುನಿಕ ಜನ ವರ್ಗದ ಅನೈತಿಕ ಮಾರ್ಗಗಳ ವಿಜೃಂಬಣೆಯನ್ನು ಪ್ರಸನ್ನ ಅವರ 'ಉಲಿ' ನಾಟಕದ ಹಿನ್ನೆಲೆಯಲ್ಲಿ ಪರಿಶೀಲಿಸಲಾಗುತ್ತದೆ.

ಒಟ್ಟಿನಲ್ಲಿ ಈ ವಸ್ತು ಕೇಂದ್ರಿತ ಅಧ್ಯಯನವು ಶಕ್ತಿರಾಜಕಾರಣದ ನೆಲೆಗಳು, ಅಧಿಕಾರ ಕೇಂದ್ರಗಳು ಸ್ಥಾಪನೆಗೊಳ್ಳುವ ಬಗೆ, ಅವುಗಳ ನಿಯಂತ್ರಣ ಹಾಗೂ ಈ ಅಧಿಕಾರ ಕೇಂದ್ರಗಳ ಸ್ವರೂಪವು ಕಾಲದಿಂದ ಕಾಲಕ್ಕೆ ಬದಲಾಗುವ ರೀತಿಯನ್ನು ಪ್ರಸನ್ನ ಅವರ ನಾಟಕಗಳ ವಿವಿಧ ರೂಪಕಗಳ ಮೂಲಕ ಪರಿಶೀಲಿಸಬಹುದಾಗಿದೆ. ಜೊತೆಗೆ ಈ ಶಕ್ತಿರಾಜಕಾರಣವು ರೂಪಿಸಿದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನೂ ಚರ್ಚಿಸಿಕೊಳ್ಳಬಹುದಾಗಿದೆ.

# ಅಧ್ಯಾಯ – ೧

## ಶಕ್ತಿರಾಜಕಾರಣದ ನೆಲೆಗಳು : ಒಂದು ತಾತ್ವಿಕ ಪ್ರವೇಶ

'ರಾಜಕಾರಣ' ಎಂಬ ಪದದ ಅರ್ಥ ವ್ಯಾಪ್ತಿ ಬಹಳ ವಿಸ್ತಾರವಾದದ್ದು ಮತ್ತು ಪ್ರಾಚೀನವಾದದ್ದು. ಇದು ಮಾನವ ಜೀವನದ ಉಗಮದೊಂದಿಗೇ ತನ್ನ ಅಸ್ತಿತ್ವವನ್ನು ಪಡೆದು ಅವನೊಂದಿಗೇ ವಿಕಸತೆಯನ್ನು ಪಡೆದುಕೊಂಡು ಬಂದಿದೆ. ಆದರೆ 'ರಾಜಕಾರಣ' ಎಂಬ ಪ್ರತ್ಯೇಕ ಅಧ್ಯಯನ ಶಿಸ್ತು ರೂಪುಗೊಂಡದ್ದು ಮಾತ್ರ ಆಧುನಿಕ ಯುಗದ ಸಂದರ್ಭದಲ್ಲಿ. ಜೊತೆಗೆ ಇದು ಇತರ ಮಾನವಿಕ ಶಾಸ್ತ್ರಗಳಾದ ಮನಃಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸಗಳಂಥ ಮುಂತಾದ ಕ್ಷೇತ್ರಗಳನ್ನೂ ವ್ಯಾಪಿಸಿಕೊಂಡು ವಿಸ್ತಾರತೆಯನ್ನ ಪಡೆಯಿತು.

'ಅಧಿಕಾರದ' ಹಿನ್ನೆಲೆಯಲ್ಲಿ ಪ್ರಬಲ ವರ್ಗಗಳು ತನ್ನ ಅಧಿಕಾರ, ವಿಧಾಯಕ ಶಕ್ತಿ, ವಿಧಿಬದ್ಧತೆಗಳನ್ನು ಸ್ಥಾಪಿಸಲು ಮತ್ತು ಶಾಶ್ವತಗೊಳ್ಳಲು ದುರ್ಬಲ ವರ್ಗಗಳ ಮೇಲೆ ನಡೆಸುವ ಹಲವು ಬಗೆಯ ಹುನ್ನಾರಗಳನ್ನು, ತಂತ್ರ-ಕುತಂತ್ರಗಳನ್ನು ಸರಳವಾಗಿ 'ರಾಜಕಾರಣ' ಎಂದು ಅರ್ಥೈಸಿಕೊಳ್ಳಬಹುದಾಗಿದೆ. 'ರಾಜಕಾರಣ' ಎಂಬುದು ಆಧುನಿಕ ಪೂರ್ವ ಯುಗದಲ್ಲಿ ಕೇವಲ ರಾಜ್ಯ, ಸರ್ಕಾರಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆಸುವ ಕಾರ್ಯಾಚರಣೆಯಾಗಿದ್ದಿತು. ಆದರೆ ಇದು ಸಾಮಾಜಿಕ ಜೀವನದಲ್ಲಿಯ ಅಧಿಕಾರಸ್ಥ ಮಂದಿಯು ನಡೆಸುವ ಕ್ರಿಯಾಶೀಲ ಚಟುವಟಿಕೆ ಕೂಡ ಆಗಿದೆ ಎಂಬುದನ್ನು ಗುರುತಿಸಬಹುದಾಗಿದೆ. ಅಂದರೆ ಸಮಾಜದ ಅಧಿಕಾರ ಮೂಲಗಳಾದ ಊಳಿಗಮಾನ್ಯ, ಪುರೋಹಿತಶಾಹಿ, ಮೇಲ್ವರ್ಗ, ಮೇಲ್ಜಾತಿ, ಮಠಮಾನ್ಯ, ದೇವರು, ದೇವಾಲಯ, ಧರ್ಮ, ಲಿಂಗ, ಭಾಷೆ, ಕುಟುಂಬ ಮುಂತಾದವುಗಳು ತಮ್ಮ ಅಧಿಕಾರ ಸ್ಥಾಪನೆ ಮತ್ತು ಅದರ ಶಾಶ್ವತತೆಗಳಿಗಾಗಿ ನಡೆಸುವ ಹುನ್ನಾರಗಳನ್ನು 'ರಾಜಕಾರಣ' ಎಂದು ಅರ್ಥೈಸಬಹುದಾಗಿದೆ. ಇಂಥ ಅಧಿಕಾರಕೇಂದ್ರಗಳು ಅಧಿಕಾರಕ್ಕಾಗಿ ಮತ್ತು ಸಾಮಾಜಿಕ ಅಂತಸ್ತುಗಳಿಗಾಗಿ ನಡೆಸುವ ಹುನ್ನಾರಗಳನ್ನೇ 'ಶಕ್ತಿರಾಜಕಾರಣ' ಎಂದು ವ್ಯಾಖ್ಯಾನಿಸಿಕೊಳ್ಳಲಾಗಿದೆ. ಈ ಶಕ್ತಿಯು ಅಲ್ಪ ಸಂಖ್ಯಾತರಿಂದ ಕೂಡಿದ್ದು, ಬಹುಸಂಖ್ಯಾತ ಜನಸಮುದಾಯದ ಮೇಲೆ ಸಾಂದರ್ಭಿಕವಾಗಿ, ಸರ್ವವ್ಯಾಪಿಯಾಗಿ, ಅವಿಭಾಜ್ಯವಾಗಿ ಮತ್ತು ಅನಿರ್ಬಂಧಿತವಾಗಿ ನಿಯಂತ್ರಣವನ್ನು ಸಾಧಿಸುವ ಹಲವು ಬಗೆಯ ಯೋಜನೆಗಳನ್ನು ಗುರುತಿಸಬಹುದಾಗಿದೆ. ಇಂಥ ಶಕ್ತಿರಾಜಕಾರಣದ ವಿವಿಧ ನೆಲೆಗಳನ್ನು ಹಾಗೂ ಧೋರಣೆಗಳನ್ನು ಕನ್ನಡದ ಪ್ರಮುಖ ನಾಟಕಕಾರರಲ್ಲಿ

ಒಬ್ಬರಾದ ಪ್ರಸನ್ನ ಅವರ ನಾಟಕಗಳ ಹಿನ್ನೆಲೆಯಲ್ಲಿ ಚರ್ಚಿಸಿಕೊಳ್ಳುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ಈ ಶಕ್ತಿರಾಜಕಾರಣವು ಜನಸಮುದಾಯದ ಮೇಲೆ ನಿಯಂತ್ರಣವನ್ನು ಸಾಧಿಸಲು 'ಶಾಂತಿಯುತ' ಮತ್ತು 'ಬಲಪ್ರಯೋಗ' ಎಂಬ ಎರಡು ರೀತಿಯ ಮಾರ್ಗಗಳನ್ನು ಬಳಸುತ್ತದೆ ಎಂದು ಡಾ.ಟಿ.ವೆಂಕಟೇಶಮೂರ್ತಿ ಅವರು ತಮ್ಮ ಅಧ್ಯಯನದಲ್ಲಿ ಗುರುತಿಸುತ್ತಾರೆ.[7] ಅಂದರೆ ಅಧಿಕಾರಸ್ಥ ಮಂದಿ ತಾವು ಸಮಾಜವನ್ನು ನಿಯಂತ್ರಿಸಲು ಹಲವು ಆದೇಶಗಳನ್ನು ಹೊರಡಿಸುವುದರ ಮೂಲಕ ಶಾಂತಿಯುತವಾಗಿ ಅಧಿಕಾರ ಚಲಾಯಿಸುತ್ತಾರೆ. ಅದೇ ಆದೇಶಗಳನ್ನು ಉಲ್ಲಂಘಿಸಿದಾಗ ಪೊಲೀಸು, ಮಿಲಿಟರಿ ಮುಂತಾದ ಪ್ರಬಲಶಕ್ತಿಗಳನ್ನು ಬಳಸಿ ಬಲಪ್ರಯೋಗದ ಮೂಲಕ ಜನಸಮುದಾಯವನ್ನು ನಿಯಂತ್ರಿಸುತ್ತಾರೆ. ಅಷ್ಟೇ ಅಲ್ಲದೆ ಈ ಅಧಿಕಾರಸ್ಥ ಮಂದಿ ಜನಸಮುದಾಯವನ್ನು ನಿಯಂತ್ರಿಸಲು ಸಂಚು, ಕುತಂತ್ರ, ಪ್ರಚೋದನೆ ಮೊದಲಾದ ಮಾರ್ಗವನ್ನು ಬಳಸುತ್ತಾರೆ. ತಾವು ಹೊರಡಿಸಿದ ಆದೇಶಗಳನ್ನು ಜನ ಸಮುದಾಯ ಪಾಲಿಸಲೇ ಬೇಕೆಂಬ ಹಠದಿಂದ ಮತ್ತು ತನ್ನ ಆದೇಶಗಳನ್ನು ಪ್ರಶ್ನಿಸದೆ ಗೌರವ ಭಾವದಿಂದ ಸ್ವೀಕರಿಸಬೇಕೆಂದು ಭೌದ್ಧಿಕ ರಾಜಕಾರಣವನ್ನು ನಡೆಸುತ್ತಾರೆ.

ಈ ಶಕ್ತಿರಾಜಕಾರಣವು ಜನಸಮುದಾಯದ ಮೇಲೆ ಅಧಿಕಾರ ಮತ್ತು ನಿಯಂತ್ರಣವನ್ನು ಸಾಧಿಸಲು ಆಧುನಿಕ ಪೂರ್ವ ಸಂದರ್ಭದಲ್ಲಿ ಮತ್ತು ವಸಾಹತುಶಾಹಿ ಸಂದರ್ಭದಲ್ಲಿ ಅನುಸರಿಸಿದ ರಾಜಕೀಯ ಮಾರ್ಗಗಳನ್ನು ಈ ಅಧ್ಯಾಯನದಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ. ಜೊತೆಗೆ ಮೈಕಲ್ ಫ್ಯೂಕೋ, ಎಡ್ವರ್ಡ ಸೈದ್, ಅಂಟೋನಿಯೋ ಗ್ರಾಮ್ಷಿ ಮುಂತಾದ ಆಧುನಿಕ ಚಿಂತಕರು ಪ್ರತಿಪಾದಿಸಿದ ಸಿದ್ಧಾಂತಗಳ ಮೂಲಕ ಪ್ರಬಲವರ್ಗಗಳು ದುರ್ಬಲ ವರ್ಗಗಳ ಮೇಲೆ ಅಧಿಕಾರ ಸ್ಥಾಪಿಸಲು ಬಳಸುವ ಹಲವು ಬಗೆಯ ರಾಜಕಾರಣಗಳನ್ನು ಈ ಅಧ್ಯಾಯಕ್ಕೆ ಒಳಪಡಿಸಿರುವ ನಾಟಕಗಳ ಹಿನ್ನೆಲೆಯಲ್ಲಿ ಚರ್ಚಿಸಿಕೊಳ್ಳುವುದು ಇಲ್ಲಿಯ ಆಶಯವಾಗಿದೆ.

- **ಆಧುನಿಕ ಪೂರ್ವ ಯುಗದ ರಾಜಕಾರಣ**

ಆಧುನಿಕ ಪೂರ್ವ ಕಾಲದಲ್ಲಿ 'ರಾಜಕಾರಣ' ಎಂದರೆ ಹಿಂದೆ ತಿಳಿಸಿದಂತೆ ಅದು ಕೇವಲ ರಾಜ್ಯ ಮತ್ತು ಸರ್ಕಾರಗಳಲ್ಲಿ ನಡೆಯುವ ಚಟುವಟಿಕೆ ಮಾತ್ರ ಎಂದು ತಿಳಿಯಲಾಗಿತ್ತು. ರಾಜಕಾರಣ ಅಧಿಕಾರದ ಸೃಷ್ಟಿ, ಚಲಾವಣೆ, ವಿಸ್ತರಣೆ, ಅದರ ಮೂಲ ಮತ್ತು ಪರಿಣಾಮ, ಅದರ ವ್ಯಾಪ್ತಿ ಇವೇ

ಮುಂತಾದವುಗಳನ್ನು ತನ್ನ ಮುಖ್ಯ ಕರ್ತವ್ಯಗಳು ಎಂದು ತಿಳಿಯಲಾಗಿತ್ತು . ಇದನ್ನೇ ಮಧ್ಯಯುಗದ ಪ್ರಸಿದ್ಧ ರಾಜಕೀಯ ಚಿಂತಕ ಮೆಕೆವೆಲ್ಲಿಯು "ಅಧಿಕಾರ ಸಿದ್ಧಾಂತ" ಎಂಬ ಪ್ರತ್ಯೇಕ ಅಧ್ಯಾಯವನ್ನು ತನ್ನ 'ದಿ ಪ್ರಿನ್ಸ್' ಗ್ರಂಥದಲ್ಲಿ ತಿಳಿಸಿದ್ದಾನೆ.

"ರಾಜಕೀಯ ಅಧಿಕಾರ ಎನ್ನುವುದು ಪ್ರಭುತ್ವ, ಯಾಜಮಾನ್ಯ ಸರ್ವಾಧಿಕಾರ ಇವುಗಳ ಸಂಬಂದಗಳಿಂದ ರೂಪುಗೊಂಡಿದ್ದು. ಒಂದು ದೇಶದ ಜನರ ಮೇಲೆ ಸ್ಥಾಪಿಸುವ ಸರ್ವಾಧಿಕಾರವನ್ನು 'ಹೆಜಮೊನಿ' ಎಂದು ಕರೆಯುತ್ತಾನೆ. ಅಂದರೆ ಸಾಮಾನ್ಯವಾಗಿ ಅಧಿಕಾರವು ಪ್ರಬಲರು ದುರ್ಬಲರ ಇಚ್ಛೆ ಅಥವಾ ಅಪೇಕ್ಷೆಗೆ ವಿರುದ್ಧವಾಗಿ ತನ್ನ ಇಚ್ಛೆಯನ್ನು ಹೇರುವ ಶಕ್ತಿಯೇ ಆಗಿದೆ." ಎಂದು ಮೆಕೆವೆಲ್ಲಿ ರಾಜ್ಯ ರಾಜಕಾರಣದ ಸರ್ವಾಧಿಕಾರಿ ಧೋರಣೆಯನ್ನು ತಿಳಿಸುತ್ತಾನೆ. ಇದನೇ ಪ್ರೊ.ಹೆಚ್.ಆರ್.ದಾಸೇಗೌಡರು ಮೆಕೆವೆಲ್ಲಿಯ 'ದಿ ಪ್ರಿನ್ಸ್' ಪುಸ್ತಕವು ಏಕಚಕ್ರಾಧಿಪತ್ಯ ಮತ್ತು ನಿರಂಕುಶ ಪ್ರಭುತ್ವಗಳನ್ನು ಎತ್ತಿ ಹಿಡಿಯುತ್ತದೆ ಎಂದು ಅಭಿಪ್ರಾಯಿಸುತ್ತಾರೆ. ಅಂದರೆ ಆಧುನಿಕ ಪೂರ್ವ ಯುಗದ ಇಡೀ ರಾಜಕೀಯ ವ್ಯವಸ್ಥೆಯು ರಾಜ ಮತ್ತು ಅವನ ಅಧಿಕಾರವನ್ನು ಮಾತ್ರ ಕೇಂದ್ರವಾಗಿಟ್ಟುಕೊಂಡಿತ್ತು. ಅದರಲ್ಲಿಯೂ ಈ ಯುಗದಲ್ಲಿ ರಾಜನ ಸರ್ವಾಧಿಕಾರತ್ವವೇ ಪ್ರಧಾನವಾಗಿದ್ದಿತು ಎಂದು ತಿಳಿಯಬಹುದಾಗಿದೆ.

ಆಧುನಿಕ ಪೂರ್ವ ಯುಗದಲ್ಲಿ ರಾಜ ಎಂಬುವವನ ಸೃಷ್ಟಿ ದೇವರಿಂದ ಆದದ್ದು ಎಂದು ನಂಬಲಾಗುತ್ತಿತ್ತು. "ದೇವರೇ ಆಳ್ವಿಕೆ ಮಾಡಲು ರಾಜನಿಗೆ ಅಧಿಕಾರವನ್ನು ನೀಡಿದ್ದಾನೆ. ಈತನಿಗೆ ವಿಧೇಯತೆ ಹಾಗೂ ಗೌರವ ತೋರಿಸುವುದು ಜನರ ಧಾರ್ಮಿಕ ಕರ್ತವ್ಯವಾಗಿರುತ್ತದೆ. ಈತನನ್ನು ವಿರೋಧಿಸುವುದು ದೇವರನ್ನು ವಿರೋಧಿಸಿದಂತೆ, ಜನರು ಈತನ ಅಧಿಕಾರ ಆಜ್ಞೆಯನ್ನು ವಿರೋಧಿಸುವುದು ಅಧರ್ಮ ಹಾಗೂ ಅಪರಾಧ. ಇಂತಹವರಿಗೆ ಶಿಕ್ಷೆ ನೀಡುವ ಅಧಿಕಾರವು ರಾಜನಿಗೆ ಇದ್ದು, ಇದು ದೇವರು ಜನರಿಗೆ ನೀಡಿದ ಶಿಕ್ಷೆಯೇ ಆಗಿರುತ್ತದೆ."[2] ಮುಂತಾದ ಅಭಿಪ್ರಾಯಗಳು ಆಧುನಿಕ ಪೂರ್ವ ಯುಗದಲ್ಲಿ ಕಾಣುತ್ತಿದ್ದವು. "ಇಲ್ಲಿನ ರಾಜನಿಗೆ ಅಧಿಕಾರಗಳು ಅಪರಿಮಿತವಾಗಿತ್ತು. ಕಾನೂನುಗಳನ್ನು ರೂಪಿಸುವುದು, ಅವುಗಳನ್ನು ಅನುಷ್ಠಾನಕ್ಕೆ ತರುವುದು ಹಾಗೂ ಸಾರ್ವಜನಿಕ ನೀತಿಯನ್ನು ನಿರ್ಧರಿಸುವುದು. ಕಾನೂನುಗಳ ಉಲ್ಲಂಘನೆಯಾದಾಗ ಶಿಕ್ಷೆ ವಿಧಿಸುವ ನ್ಯಾಯಾಧೀಶನೂ ಆತನೇ ಆಗಿದ್ದನು. ಇಂಥ ಧಾರ್ಮಿಕ ನಂಬಿಕೆಗಳೇ ರಾಜನನ್ನು ಸರ್ವಾಧಿಕಾರಿಯಾಗುವಂತೆ ಪ್ರೇರೇಪಿಸುತ್ತಿದ್ದವು. ಹಾಗಾಗಿಯೇ ರಾಜನೂ ಸಹ ಮತಪಂಥ, ಧರ್ಮಗಳನ್ನೂ ತನ್ನ ರಾಜ್ಯ ರಾಜಕಾರಣದ ಜೊತೆ ಜೊತೆಯಲ್ಲಿಯೇ ಪೋಷಿಸುತ್ತಿದ್ದನು. ಹೀಗೆ ಧರ್ಮ-ಮತಪಂಥಗಳನ್ನು ಪೋಷಿಸುವುದೂ ರಾಜನ ರಾಜಕಾರಣದ ಒಂದು ಭಾಗವೇ ಆಗಿದ್ದಿತು. ಆ ಮೂಲಕ

ಅವುಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಲು ಯತ್ನಿಸುತ್ತಿರುತ್ತಾನೆ. ಇನ್ನೂ ಅನೇಕ ಸಲ ಈ ಧರ್ಮ-ಮತಪಂಥಗಳೇ ತನ್ನ ಧಾರ್ಮಿಕ ನಂಬಿಕೆಗಳ ಬಲದಿಂದ ರಾಜನ ಮೇಲೆ ಮತ್ತು ರಾಜ ಪ್ರಭುತ್ವದ ಮೇಲೆ ಅಧಿಕಾರ ಸ್ಥಾಪಿಸುವುದರ ಮೂಲಕ ತಮ್ಮ ಪ್ರಾಬಲ್ಯವನ್ನು ಮೆರೆಯುತ್ತಿದ್ದವು. ಮತ್ತೂ ಕೆಲವು ಸಲ ರಾಜ ಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳೆರಡೂ ಜಂಟಿಯಾಗಿ ಜನ ಸಮುದಾಯದ ಮೇಲೆ ಅಧಿಕಾರ ಚಲಾಯಿಸುತ್ತಿದ್ದವು. ಧಾರ್ಮಿಕ ಮುಖಂಡ ಅಥವ ಪುರೋಹಿತಶಾಹಿಗಳ ನಿಯಮಗಳೇ ರಾಜಾಜ್ಞೆಗಳಾಗಿರುತ್ತಿದ್ದವು.[೩]

ಇಂಥ ರಾಜಕೀಯ ದ್ವಂದ್ವವನ್ನೇ ಮಧ್ಯಕಾಲೀನ ಸಾಂಸ್ಕೃತಿಕ ಇತಿಹಾಸ ಚಿಂತಕರು "ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳು ಪರಸ್ಪರ ಸಂಬಂಧ ಮತ್ತು ಪೈಪೋಟಿಯ ಮೇಲೆ ವ್ಯವಸ್ಥೆಯನ್ನು ನಿರ್ಮಿಸುವ ಮತ್ತು ಕೆಡವುವ ಪ್ರಕ್ರಿಯೆಯಲ್ಲಿ ತಮ್ಮ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಿದ್ದವು"[೪] ಎಂದು ಅಭಿಪ್ರಾಯಿಸುತ್ತಾರೆ.

ಒಟ್ಟಿನಲ್ಲಿ ಆಧುನಿಕ ಪೂರ್ವ ಯುಗದಲ್ಲಿ ಎರಡು ರೀತಿಯ ಶಕ್ತಿರಾಜಕಾರಣವನ್ನು ಗುರುತಿಸಬಹುದಾಗಿದೆ. ಒಂದು ರಾಜಪ್ರಭುತ್ವದ ಹೆಸರಿನಲ್ಲಿ, ಮತ್ತೊಂದು ಮತ-ಧರ್ಮದ ಹೆಸರಿನಲ್ಲಿ. ಆರ್ಥಿಕ ಅಸಮಾನತೆಯನ್ನು ಪ್ರತಿಪಾದಿಸುವ ರಾಜಸತ್ತೆ, ಸಾಮಾಜಿಕ-ಸಾಂಸ್ಕೃತಿಕ ಅಸಮಾನತೆಯನ್ನು ಪ್ರತಿಪಾದಿಸುವ ಮತ-ಧರ್ಮ ವ್ಯವಸ್ಥೆ ಎರಡೂ ಜನಸಮುದಾಯವನ್ನು ಶೋಷಿಸುವ ವಿಭಿನ್ನ ಶಕ್ತಿರಾಜಕಾರಣದ ನೆಲೆಗಳು. ರಾಜಪ್ರಭುತ್ವ ನಿರ್ಮಿಸುವ ಶಕ್ತಿರಾಜಕಾರಣಕ್ಕಿಂತ ಮತ-ಧರ್ಮ ವ್ಯವಸ್ಥೆ ನಿರ್ಮಿಸುವ ಶಕ್ತಿರಾಜಕಾರಣ ಬಹಳ ಅಪಾಯಕಾರಿಯಾದದ್ದು ಎಂದು ಹೇಳಬಹುದು. ಅದೇನೇ ಇರಲಿ, ರಾಜಪ್ರಭುತ್ವ ಮತ್ತು ಮತ-ಧರ್ಮ ಪ್ರಭುತ್ವ ಆಧುನಿಕ ಪೂರ್ವ ಯುಗದಲ್ಲಿ ಸ್ಥಾಪಿಸಿದ ಇಂಥ ಶಕ್ತಿರಾಜಕಾರಣಗಳು ಆಧುನಿಕ ಯುಗದಲ್ಲಿ ಹೇಗೆ ಪ್ರಾಬಲ್ಯ ಸ್ಥಾಪಿಸಿವೆ ಎಂಬುದನ್ನು ಪ್ರಸನ್ನ ಅವರ ನಾಟಕಗಳ ಹಿನ್ನೆಲೆಯಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ.

- **ವಸಾಹತುಶಾಹಿ ರಾಜಕಾರಣ**

"ಯುರೋಪಿಯನ್ ಪುನರುಜ್ಜೀವನ ಘಟ್ಟ ಹಾಗು ಬಂಡವಾಳಶಾಹಿ ಯುಗದ ಆರಂಭದಲ್ಲಿ ರೂಪುಗೊಂಡ ವಸಾಹತುವಾದ ಮೂಲತಃ ಒಂದು ಯಾಜಮಾನ್ಯ ವ್ಯವಸ್ಥೆ ವಸಾಹತುವಾದ

ನಾಗರೀಕರಣದ ಹೆಸರಿನಲ್ಲಿ ದೇಶೀಯ ನಾಗರೀಕತೆಗಳನ್ನು ನಿರ್ನಾಮ ಮಾಡಲೆತ್ನಿಸುತ್ತದೆ. ಧರ್ಮ ಮತ್ತು ಜ್ಞಾನ ಪ್ರಸಾರದ ಹೆಸರಿನಲ್ಲಿ ಅದು ದೇಶೀ ಜ್ಞಾನ ಮತ್ತು ಧರ್ಮಗಳನ್ನು ಅಧೀನಗೊಳಿಸಿಕೊಳ್ಳಲು ಯತ್ನಿಸುತ್ತಿರುತ್ತದೆ. ಇಲ್ಲಿ ಅದಕ್ಕೆ ತನ್ನ ಸಂಸ್ಕೃತಿಯ ಹೇರಿಕೆ ಹಾಗೂ ಅದರ ಹಿರಿಮೆಯ ಪ್ರತಿಷ್ಠಾಪನೆಯೇ ಮುಖ್ಯವಾಗಿದೆ. ಇದರ ಮೂಲಕ ವಸಾಹತುವಾದ ದೇಶೀ, ಜಾನಪದೀಯ ಸಾಂಸ್ಕೃತಿಕ ಮಾದರಿಗಳನ್ನು ಕನಿಷ್ಠಗೊಳಿಸಲು ಯತ್ನಿಸುತ್ತದೆ. ದೇಶೀ ಮಾನವನನ್ನು ಅರೆ ಮಾನವನನ್ನಾಗಿ ಚಿತ್ರಿಸುತ್ತದೆ. ವಸಾಹತುಗಾರ ಮತ್ತು ವಸಾಹತೀಕರಣಗೊಂಡವರಿಬ್ಬರನ್ನೂ ಅದು ನಿರ್ಮಾನವೀಕರಣಗೊಳಿಸುತ್ತಿರುತ್ತದೆ."[೫] ಎಂದು ನಟರಾಜ್ ಹುಳಿಯಾರ್ ವಸಾಹತುಶಾಹಿಯ ದಮನೀಕೃತ ರಾಜಕಾರಣವನ್ನು ಈ ರೀತಿ ವ್ಯಾಖ್ಯಾನಿಸುತ್ತಾರೆ.

"ಬ್ರಿಟೀಷ್ ವಸಾಹತುಶಾಹಿ ಪೂರ್ವ ದೇಶಗಳ ಮೇಲೆ ಅಧಿಕಾರ ಮತ್ತು ನಿಯಂತ್ರಣವನ್ನು ಸಾಧಿಸಲು ಸ್ಥಳೀಯ ದೇಶೀ ಪರಂಪರಾಗತ ಮೌಲ್ಯಗಳನ್ನು ಕನಿಷ್ಠವಾದವುಗಳು ಎಂದು ನಂಬಿಸಿತು. ಜನಸಮುದಾಯದ ಭಾಷೆ, ಧರ್ಮ, ಚರಿತ್ರೆ, ಶಿಕ್ಷಣ, ಜಾನಪದ, ಮುಂತಾದ ಮೌಲ್ಯಗಳನ್ನು ಅಪಮೌಲ್ಯಗೊಳಿಸಿತು. ಆ ಮೂಲಕ ಜನಸಮುದಾಯವನ್ನು ಭಯ, ಸಿನಿಕತನ, ಹಿಂಜರಿಕೆ, ಅಸ್ತಿತ್ವವಾದಿ, ಯಾತನೆಗಳಂಥ ಸ್ಥಿತಿಗೆ ವಸಾಹತುಸಾಹಿ ಪ್ರಭುತ್ವ ದೂಡಿತು" ಎಂದು ನಟರಾಜ್ ಹುಳಿಯಾರ್ ತಿಳಿಸುತ್ತಾರೆ.

ಯುರೋಪಿಯನ್ ಪುನರುಜ್ಜೀವನ ಘಟ್ಟದಲ್ಲಿ ಹುಟ್ಟಿದ ಹೊಸ ದಮನಕಾರಿ ಸಿದ್ಧಾಂತಗಳ ಸಾಂಸ್ಥಿಕ ರೂಪವಾದ ವಸಾಹತುವಾದ ಫ್ಯಾಸಿಸ್ಟ್‌ವಾದದ ಇನ್ನೊಂದು ರೂಪ ಎಂದು ಸಾರ್ತ್ರ್ ಕರೆಯುತ್ತಾನೆ. "ವಸಾಹತೀಕರಣದ ಗುರಿಯೇ ಚರಿತ್ರೆಯನ್ನು ವ್ಯವಸ್ಥಿತವಾಗಿ ವಿರೂಪಗೊಳಸುವುದು ಹಾಗೂ ದೇಶೀಯರನ್ನು ಅರೆಮಾನವ ಸ್ಥಿತಿಯಲ್ಲಿಡುವುದು." ಎಂದು ಸಾರ್ತ್ರ್ ಅಭಿಪ್ರಾಯಿಸುತ್ತಾನೆ. ಜೊತೆಗೆ ವಸಾಹತುವಾದಿ ರಾಜಕಾರಣದ ಹಿಂಸಾ ಮಾರ್ಗವನ್ನು ಎರಡು ಬಗೆಯಲ್ಲಿ ಗುರುತಿಸುತ್ತಾನೆ :

"ವಸಾಹತುವಾದಿ ಹಿಂಸೆ ದೇಶೀಯರನ್ನು ಗುಲಾಮರನ್ನಾಗಿ ಮಾಡಿ ತನ್ನ ಬಂದೂಕಿನ ನಳಿಗೆಯೆದುರು ನಿಲ್ಲಿಸಿಕೊಂಡಿರುತ್ತದೆ. ಅವನನ್ನು ನಿರ್ಮಾನವೀಕರಣಗೊಳಿಸುತ್ತದೆ. ವಸಾಹತೀಕರಣವನ್ನು ಪ್ರತಿಭಟಿಸಿದರೆ ಸಾಯುವ ದೇಶಿಯ, ವಸಾಹತೀಕರಣವನ್ನು ಒಪ್ಪಿಕೊಂಡರೆ ತನ್ನನ್ನು ತಾನೇ ಕನಿಷ್ಠ ಸ್ಥಿತಿಗೆ ದೂಡಿಕೊಳ್ಳುತ್ತಾನೆ. ಅಂದರೆ ಈ ಎರಡೂ ಸ್ಥಿತಿಗಳಲ್ಲಿ ಅವನು ಮನುಷ್ಯನಾಗಿ ಉಳಿದಿರುವುದಿಲ್ಲ." ಆದರೆ ವಸಾಹತು ಸನ್ನಿವೇಶದ ನಿರ್ಮಾನವೀಕರಣ ಅಂತಿಮವಾಗಿ ವಸಾಹತುಗಾರ ಹಾಗೂ ವಸಾಹತೀಕರಣಗೊಂಡವರಿಬ್ಬರನ್ನೂ ಒಳಗೊಳ್ಳುವುದನ್ನು ಸಾರ್ತ್ರ್ ಗುರುತಿಸುತ್ತಾನೆ. "ಶೋಷಿತನ ನಿರ್ಮಾನವೀಕರಣದ ಇನ್ನೊಂದು ಮುಖವೇ ಶೋಷಕನ ಪರಕೀಯತೆ" ಎನ್ನುತ್ತಾನೆ.[೬]

ಹೀಗೆ ವಸಾಹತುಶಾಹಿ ತನ್ನದೇ ಆದ ಸಿದ್ಧಾಂತಗಳ ಮೂಲಕ ಪೂರ್ವ ದೇಶಗಳ ಮೇಲೆ ದೈಹಿಕವಾಗಿ ಮತ್ತು ಮಾನಸಿಕವಾಗಿ, ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಅಧಿಪತ್ಯವನ್ನು ಸಾಧಿಸುತ್ತಾ ಬಂದಿದೆ. ಈ ಅಧಿಪತ್ಯ ಸ್ಥಾಪನೆಗಾಗಿ ಹಲವು ಸಂಚಿನ ಮಾರ್ಗ ಮತ್ತು ಹಿಂಸಾ ಮಾರ್ಗಗಳನ್ನು ಬಳಸುತ್ತಾ ಬಂದಿದೆ. ಆದರೂ ವಸಾಹತುಶಾಹಿ ವಾದವನ್ನು ಸಂಪೂರ್ಣವಾಗಿ ದಮನದ ಹಾಗೂ ಹಿಂಸೆಯ ಸಾಧನವನ್ನಾಗಿ ನೋಡಲು ಬರುವುದಿಲ್ಲ ಎಂದೂ ಸಾರ್ತ್ರ ತಿಳಿಸುತ್ತಾನೆ.

ಇದೇ ಅಂಶವನ್ನು ಪುಷ್ಟೀಕರಿಸುವಂತೆ ನಟರಾಜ್ ಹುಳಿಯಾರ್ ಮತ್ತು ಡಿ.ಆರ್.ನಾಗರಾಜ್ ಅವರುಗಳು ವ್ಯಾಖ್ಯಾನಿಸುವುದನ್ನು ಗಮನಿಸಬಹುದು :

"ಸಾಂಪ್ರದಾಯಿಕ ಸಮಾಜದ ಸ್ಥಳೀಯ ಅಧಿಕಾರ ಕೇಂದ್ರಗಳ ದಮನಕ್ಕೆ ಒಳಗಾದ ಅಸ್ಪೃಶ್ಯರಿಗೆ, ಸ್ತ್ರೀಯರಿಗೆ ಅಥವಾ ಅವೈದಿಕ ವರ್ಗಗಳಿಗೆ ವಸಾಹತುವಾದವೇ ವಿಮೋಚನೆಯ ಹಾದಿಯಾಗುತ್ತದೆ. ದೇಶೀ ಸಾಂಪ್ರದಾಯಿಕ ದಮನದ ಬೇರುಗಳಿಗೆ ಅದು ನಿರ್ಣಾಯಕ ಹೊಡೆತ ಕೊಡುತ್ತದೆ. ಜಾತಿಪದ್ಧತಿಯ ಖಾಯಂ ಅಸಮಾನತೆಯನ್ನು ಕದಲಿಸತೊಡಗುತ್ತದೆ." ಎಂದು ನಟರಾಜ್ ಹುಳಿಯಾರ್ ಪರಂಪರೆಯಲ್ಲಿದ್ದ ಅಸಮಾನ ಶ್ರೇಣೀಕೃತ ವ್ಯವಸ್ಥೆಯನ್ನು ತೊಡೆದು ಹಾಕುವಲ್ಲಿ ವಸಾಹತುವಾದ ಸಕ್ರೀಯವಾದ ಕೆಲಸ ಮಾಡಿದೆ ಎಂದು ತಿಳಿಸುತ್ತಾರೆ.[೭] ಇಷ್ಟೇ ಅಲ್ಲದೇ "ವಸಾಹತುಶಾಹಿ ಆಧುನಿಕ ಪ್ರಭುತ್ವ ಬಹುಮುಖೀ ಆಯ್ಕೆಗಳನ್ನು ಇಲ್ಲವಾಗಿಸಿ ಏಕಮುಖೀ ಆಯ್ಕೆಯ ಅನಿವಾರ್ಯತೆಯನ್ನು ಸೃಷ್ಟಿಸಿತು. ಒಂದೇ ನಾಡು, ಕುಲ, ದೈವ, ಭಾಷೆ ಮುಂತಾದ ವಿಚಾರಗಳಲ್ಲಿ ಆಳುವವನ ಮತ್ತು ಆಳಿಸಿಕೊಳ್ಳುವವನ ಏಕಾಕಾರಿ ಮನಃಸ್ಥಿತಿ ಮತ್ತು ಸಾಂಸ್ಕೃತಿಕ ರಚನೆಯ ಏಕಾಕಾರೀ ಗುಣ ಇಲ್ಲಿ ಪ್ರಧಾನವಾಯಿತು. ಭಿನ್ನವನ್ನು ಬಡಿದು ಒಂದೇ ಎರಕಕ್ಕೆ ಬಗ್ಗಿಸಲು ಆಧುನಿಕ ರಾಜಕೀಯ ಪ್ರಭುತ್ವಗಳು ಪ್ರಯತ್ನಿಸಿದವು." ಎಂದು ಡಿ.ಆರ್.ನಾಗರಾಜ್ ಆಧುನಿಕ ಪೂರ್ವ ಯುಗದಲ್ಲಿದ್ದ ಭಿನ್ನತೆಯನ್ನು ಒಡೆದು ಏಕತೆಯನ್ನು ಸಾಧಿಸುವಲ್ಲಿ ವಸಾಹತುಶಾಹಿ ಪ್ರಭುತ್ವ ಬಹಳವಾಗಿ ಶ್ರಮಿಸಿದೆ ಎಂದು ತಿಳಿಸುತ್ತಾರೆ.[೮]

ಒಟ್ಟಿನಲ್ಲಿ ವಸಾಹತುಶಾಹಿ ಪ್ರಭುತ್ವದ ರಾಜಕಾರಣ ದುರ್ಬಲ ದೇಶಗಳ ಮೇಲೆ ಅಧಿಕಾರ ಮತ್ತು ನಿಯಂತ್ರಣವನ್ನು ಸಾಧಿಸಲು ಹಲವು ದಮನಕಾರಿ ಹಿಂಸಾಮಾರ್ಗಗಳನ್ನು ಬಳಸುತ್ತಲೇ ಒಳಿತಿನ ಅಭಿವೃದ್ಧಿ ಮಾರ್ಗವನ್ನು ನಿರ್ಮಿಸಿತು.

* **ಫ್ಯೂಕೋನ ಸಂಕಥನ ಪರಿಕಲ್ಪನೆಯ ಹಿನ್ನೆಲೆಯಲ್ಲಿ ರಾಜಕಾರಣದ ವಿಶ್ಲೇಷಣೆ**

ಫ್ಯೂಕೋನ ಸಂಕಥನ ಪರಿಕಲ್ಪನೆಯಲ್ಲಿ ಕಂಡುಬರುವ ಮಹತ್ವದ ವಿಚಾರವೆಂದರೆ 'ಅಧಿಕಾರ ಮತ್ತು ಜ್ಞಾನ'ಗಳ ಕುರಿತಾದ ಚಿಂತನೆ. ಫ್ಯೂಕೋ ತನ್ನ ಸಿದ್ಧಾಂತಗಳ ಪ್ರತಿಪಾದನೆಯನ್ನು ಪ್ರಾರಂಭಿಸಿದ್ದೇ 'ಜ್ಞಾನವೇ ಅಧಿಕಾರ' ಎಂಬ ತತ್ವದಿಂದ. ಆತನ ಮುಖ್ಯ ಕಾಳಜಿ ಇದ್ದದ್ದು ಮನುಷ್ಯನ ಜ್ಞಾನದ ಬಗ್ಗೆ ಮತ್ತು ಆ ಜ್ಞಾನದಿಂದ ಒದಗಿದ ಶಕ್ತಿ ಅಥವ ಅಧಿಕಾರ ಮನುಷ್ಯರ ಮೇಲೆ ಯಾವರೀತಿಯ ಪರಿಣಾಮ ಬೀರುತ್ತದೆ ಎಂದು.

"ಜ್ಞಾನ ಅನ್ನುವುದು ಇದ್ದರೆ ಜನರ ಒಂದು ಗುಂಪು ಒಂದು ಲೋಕದರ್ಶನವನ್ನೇ ಸೃಷ್ಟಿಸುವ ಶಕ್ತಿಯನ್ನು ಹೊಂದಿರುತ್ತದೆ. ಅಧಿಕಾರವನ್ನು ಸೃಷ್ಟಿಸಿಕೊಳ್ಳುವ ಶಕ್ತಿಗಳು ತಮಗೆ ಲಭ್ಯವಿರುವ ಭಾಷಿಕ ರಚನೆಗಳನ್ನು ಬಳಸಿಕೊಂಡು ಸಮಾಜದ ಮೇಲೆ ಅನೇಕ ಬಗೆಯ ನಿಯಂತ್ರಣಗಳನ್ನು ರೂಪಿಸಿಕೊಳ್ಳುತ್ತವೆ. ಅವು ಜ್ಞಾನವನ್ನು ತಮಗೆ ಬೇಕಾದಂತೆ ಬಳಕೆ ಮಾಡಿಕೊಳ್ಳುತ್ತಿರುತ್ತವೆ." ಅಂದರೆ ಈತನ ಪ್ರಕಾರ ಜ್ಞಾನ ಮತ್ತು ಅಧಿಕಾರ ಹೊಂದಿರುವ ಪ್ರಬಲ ಶಕ್ತಿಗಳು ಸಮಾಜದಲ್ಲಿ ತಮ್ಮದೇ ಆದ ಪ್ರಾಬಲ್ಯವನ್ನು ಸಾಧಿಸುತ್ತದೆ, ಜ್ಞಾನವೇ ಅಧಿಕಾರ ಸ್ಥಾಪನೆಯ ಪ್ರಬಲ ಅಸ್ತ್ರ ಎಂದು ಪ್ರತಿಪಾದಿಸುತ್ತಾನೆ. ಈ ಬಗೆಯ ಜ್ಞಾನಾಧಿಕಾರದ ರಾಜಕಾರಣಕ್ಕೆ ಪ್ರಸನ್ನ ಅವರ 'ಮಹಿಮಾಪುರ' ನಾಟಕ ಉತ್ತಮ ನಿದರ್ಶನವಾಗಿದೆ.

'ಸತ್ಯ ಮತ್ತು ಅಧಿಕಾರ' ಎಂಬ ಲೇಖನದಲ್ಲಿ "ಸತ್ಯವೆಂಬುದು ಅಧಿಕಾರದ ಹೊರಗಿಲ್ಲ. ಸತ್ಯವೇ ಅಧಿಕಾರ, ನಾನಾ ಬಗೆಯ ವಿಧಿನಿಷೇಧಗಳಿಂದ ಅದು ಜನಿಸುತ್ತದೆ ಮತ್ತು ಅಧಿಕಾರದ ನಿಯಮಿತ ಪರಿಣಾಮಗಳನ್ನು ಉಂಟುಮಾಡುತ್ತದೆ. ಪ್ರತಿಯೊಂದು ಸಮಾಜದಲ್ಲೂ ಸತ್ಯದ ಸಾಮಾನ್ಯ ರಾಜಕೀಯ ಇರುತ್ತದೆ." ಎಂದು ಫ್ಯೂಕೋ ಬರೆಯುತ್ತಾನೆ.

ಈತನ ಪ್ರಕಾರ 'ಸತ್ಯ ಮತ್ತು ಜ್ಞಾನವೇ ಅಧಿಕಾರ'. ಈ ಅಧಿಕಾರದ ಆಕಾಂಕ್ಷೆ ಸತ್ಯದ ಆಕಾಂಕ್ಷೆಯನ್ನು ಮೀರುತ್ತದೆ ಮತ್ತು ಮಾನವನ ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳಲ್ಲಿಯೂ ಅಧಿಕಾರಾಕಾಂಕ್ಷೆ ಮಧ್ಯಪ್ರವೇಶ ಮಾಡುತ್ತದೆಂದು ಫ್ಯೂಕೋ ವಾದಿಸುತ್ತಾನೆ. ಒಟ್ಟಿನಲ್ಲಿ ಈ ಅಧಿಕಾರಾಕಾಂಕ್ಷೆಯಿಂದ ಹೊರಟ ಜ್ಞಾನ ಸತ್ಯವನ್ನೂ ಮೀರಿ ನಿಲ್ಲುತ್ತದೆ ಎಂಬುದನ್ನು ಪ್ರಸ್ತುತ ಮಾನವನ ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳ ನೆಲೆಯಲ್ಲಿ ಗುರುತಿಸಬಹುದಾಗಿದೆ. ಇದನ್ನೇ ಪ್ರಸನ್ನ ಅವರು ತಮ್ಮ 'ಉಲಿ' ನಾಟಕದಲ್ಲಿ ಮಂಡಿಸುವ ಪ್ರಯತ್ನ ಮಾಡಿದ್ದಾರೆ.

- **ಎಡ್ವರ್ಡ್ ಸೈದ್‌ನ ಓರಿಯಂಟಲಿಸಂ : ಜ್ಞಾನ ಮತ್ತು ಸಾಂಸ್ಥಿಕ ನಿಯಂತ್ರಣ**

ಮಾನವ ಹಕ್ಕುಗಳ ನಿಷ್ಠುರ ಪ್ರತಿಪಾದಕ ಮತ್ತು ಖ್ಯಾತ ಸಾಹಿತ್ಯ ವಿಮರ್ಶಕನಾದ ಎಡ್ವರ್ಡ್ ಡಬ್ಲ್ಯು.ಬಿ.ಸೈದ್‌ನ ವಿದ್ವದ್ ಸಾಹಸಗಳು ಈತನಿಗೆ ವಿಶ್ವಾದ್ಯಂತ ಖ್ಯಾತಿ ನೀಡಿವೆ. ಪಾಶ್ಚಿಮಾತ್ಯ ಸಾಮ್ರಾಜ್ಯಶಾಹಿಯು ತನ್ನ ಅಧೀನ ರಾಷ್ಟ್ರಗಳನ್ನು ನಿಯಂತ್ರಿಸಲು ನಿರ್ಮಿಸಿಕೊಂಡ ಎಲ್ಲಾ ನಿಯಂತ್ರಣ ವಿಧಾನಗಳನ್ನು ಒಟ್ಟಾರೆಯಾಗಿ ಒಂದು 'ಸಂಸ್ಥೆ' (ಅಧಿಕಾರ ಕೇಂದ್ರ) ಎಂದು ಪರಿಗಣಿಸುತ್ತಾನೆ. ಈತ, ಹೇಗೆ ಪಾಶ್ಚಾತ್ಯ ಜ್ಞಾನವು ಶುದ್ಧ ಅತಾರ್ಕಿಕವಾದುದು ಮತ್ತು ಅದು ಅಧಿಕಾರ ಹಾಗು ರಾಜಕೀಯ ಹಿತಾಸಕ್ತಿಗಳಿಂದ ಹೇಗೆ ವಿಕೃತಗೊಂಡಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾನೆ.[೯]

ಸಾಮ್ರಾಜ್ಯಶಾಹಿ ಸನ್ನಿವೇಶದ ಆಳದಲ್ಲಿ 'ಪ್ರಾಚ್ಯವನ್ನು ಅನ್ಯವಾಗಿಸುವ ಕ್ರಮಬದ್ಧ ಪ್ರಯತ್ನಗಳಿವೆ' ಎಂದು ಸೈದ್ ಹೇಳುತ್ತಾನೆ. ಈ ಅನ್ಯವಾಗಿಸುವ ಕ್ರಮವನ್ನು ಸಿ.ಎನ್.ರಾಮಚಂದ್ರನ್ ಹೀಗೆ ಸಂಗ್ರಹಿಸಿ ಹೇಳಿದ್ದಾರೆ :

"ಮೊದಲಿಗೆ ಪಶ್ಚಿಮವು ಕೆಲವು ಧನಾತ್ಮಕ ಮೌಲ್ಯಗಳನ್ನು, ಗುಣಗಳನ್ನು ತನಗೆ ಆರೋಪಿಸಿಕೊಳ್ಳುತ್ತದೆ. ಅನಂತರ, ಅವುಗಳಿಗೆ ವಿರುದ್ಧವಾದ ಮೌಲ್ಯಗಳನ್ನು, ಗುಣಗಳನ್ನು ಪ್ರಾಚ್ಯದ ಮೇಲೆ ಆರೋಪಿಸಿ ಆ ಕಾರಣದಿಂದ ಅದನ್ನು 'ಅನ್ಯ'ವನ್ನಾಗಿಸುತ್ತದೆ. ಉದಾಹರಣೆಗೆ ವಸಾಹತುಶಾಹಿ ರಾಷ್ಟ್ರಗಳು ತಮ್ಮ ಗುಣಗಳನ್ನು ವಿಚಾರವಾದ, ಪ್ರಜಾತಂತ್ರ ವ್ಯವಸ್ಥೆ, ತರ್ಕಬದ್ಧಮತ, ಸುಭದ್ರನ್ಯಾಯವ್ಯವಸ್ಥೆ, ಶಿಸ್ತು, ನಿಗ್ರಹ, ಸಂಯಮ ಇತ್ಯಾದಿಯಾಗಿ ಗುರುತಿಸಿಕೊಳ್ಳುತ್ತದೆ. ರಹಸ್ಯವಾದ, ಸರ್ವಾಧಿಕಾರತ್ವ, ಧಮಾಂಧತೆ, ಅರಾಜಕತೆ ಮತ್ತು ಭೋಗಲಾಲಸೆ ಇವುಗಳು ಪೌರ್ವಾತ್ಯ ರಾಷ್ಟ್ರಗಳ ಅವಗುಣಗಳು ಹಾಗು ಇವು ಅನಾಗರೀಕ ಸಮಾಜದ ಲಕ್ಷಣಗಳು ಎಂದು ನಂಬಿಸಿತು. ಹಾಗಾಗಿಯೇ ಇಂಥ ಪೌರ್ವಾತ್ಯ ರಾಷ್ಟ್ರಗಳ ಮೇಲೆ ಅಧಿಕಾರ ಚಲಾಯಿಸುವುದು ಪಶ್ಚಿಮ ರಾಷ್ಟ್ರಗಳ ಹಕ್ಕು ಎಂದು ವಾದಿಸಿತು. ಅಷ್ಟೇ ಅಲ್ಲದೆ ನೈಸರ್ಗಿಕ ನ್ಯಾಯವೂ ಆಗಿದೆ. ಅನಾಗರಿಕ ರಾಷ್ಟ್ರಗಳ ಜವಾಬ್ದಾರಿಯನ್ನು ಹೊತ್ತುಕೊಂಡು ಅವುಗಳನ್ನು ನಾಗರಿಕತೆಯ ಕಡೆಗೆ, ಸಭ್ಯತೆಯ ಕಡೆಗೆ ಒಯ್ಯುವುದು ದೇವರೇ ನಿಗದಿಪಡಿಸಿದಂತಹ 'ಬಿಳಿಯರ ಹೊರೆ' ಎಂದು ತಿಳಿಸಿ ತಮ್ಮ ಅಧಿಪತ್ಯವನ್ನು ಪೌರ್ವಾತ್ಯ ದೇಶಗಳ ಮೇಲೆ ಸಾಧಿಸುವ ಪ್ರಯತ್ನ ಮಾಡಿತು. ಇದನ್ನೇ ಸೈದ್ 'ಭೌದ್ಧಿಕ ಪ್ರಭುತ್ವ' ಎಂದು ಕರೆದಿದ್ದಾನೆ.[೧೦] ಅಂದರೆ, ವಸಾಹತುಶಾಹಿ ಪೌರ್ವಾತ್ಯ ರಾಷ್ಟ್ರಗಳ ಜನಸಮುದಾಯವನ್ನು ಭೌದ್ಧಿಕವಾಗಿ ದುರ್ಬಲಗೊಳಿಸುತ್ತ ತಮ್ಮ ಪ್ರಭುತ್ವವನ್ನು ಸಾಧಿಸಿತು. ಸೈದ್‌ನ ಈ ವಿಚಾರಧಾರೆಯನ್ನು ನಮ್ಮ

ಸಂದರ್ಭಕ್ಕೆ ಅನ್ವಯಿಸಿ ಹೇಳುವುದಾದರೆ ಭಾರತದ ಸಂದರ್ಭದಲ್ಲಿ ಒಳ ವಸಾಹತುಶಾಹಿ ಸ್ಥಾಪಿಸಿದ ಪ್ರಬಲ ಪುರೋಹಿತಶಾಹಿ ವರ್ಗದ ಶಕ್ತಿರಾಜಕಾರಣದ ಕೇಂದ್ರವಾಗಿತ್ತು. ಈ ವರ್ಗವು ತನಗಿಂತ ಕೆಳವರ್ಗಗಳ ಮೇಲೆ ಹೇರಿದ ಒಳ ನಿರ್ವಚನವನ್ನ ಪ್ರಸ್ಥಾಪಿಸುತ್ತಾ ಅಧಿಕಾರ ಹಾಗೂ ನಿಯಮತ್ರಣ ಸ್ಥಾಪಿಸುತ್ತಾ ಬಂದಿರುವುದನ್ನು ಭೌದ್ಧಿಕ ಪ್ರಭುತ್ವ ಎಂದು ಕರೆಯಬಹುದಾಗಿವೆ.

ವಸಾಹತುಶಾಹಿ ಪ್ರಭುತ್ವದ ಇಂಥ ಭೌದ್ಧಿಕ ರಾಜಕಾರಣವನ್ನು ಕೆಳವರ್ಗಗಳು ಸಂಪೂರ್ಣ ಸತ್ಯವೆಂದು ನಂಬಿ ಅದರ ವಿಚಾರಗಳಿಗೆ ತರ್ಕಬದ್ಧತೆಗೆ ಮಾರುಹೋದವು. ಚರಿತ್ರೆಯ ಇಂಥ ಹುನ್ನಾರವನ್ನು ಅರಿಯಲು ಹೊಸ ಮಾರ್ಗವನ್ನು ಕಟ್ಟಿಕೊಳ್ಳಬೇಕಾದ ಅನಿವಾರ್ಯತೆ ಇದೆ ಎಂದು ಸೈದ್ ವಾದಿಸುತ್ತಾನೆ. "ಇತಿಹಾಸವನ್ನು ಮತ್ತೊಮ್ಮೆ ಹೊಸ ರೀತಿಯಲ್ಲಿ ಬರೆಯುವುದು ಮಾತ್ರವಷ್ಟೇ ಅಲ್ಲ ಪಾಶ್ಚಾತ್ಯ ಪಠ್ಯಗಳ ಮನೋಗತಿತ್ವದ ಮರುವ್ಯಾಖ್ಯಾನದ ಮೂಲಕ ಅವುಗಳ ಆಳದಲ್ಲಿ ಅಡಗಿರುವ ಸಾಂಸ್ಕೃತಿಕ ರಾಜಕಾರಣವನ್ನು ಬಯಲಿಗೆಳೆಯುವ ಕೆಲಸ ಮಾಡುವುದು ಕೂಡ ಅಗತ್ಯ. ಇಲ್ಲಿ ಸಾಹಿತ್ಯಕ ವಸ್ತುಸ್ಥಿತಿ

ವಾದದ ಪಾರಂಪರಿಕ ನಂಬಿಕೆಗಳು ಪ್ರಶ್ನಿತಗೊಳ್ಳಬೇಕಿದೆ ಮತ್ತು ಯಾವ ಅಧಿಕಾರಶಾಹಿಯು ಬಚ್ಚಿಟ್ಟುಕೊಳ್ಳಲಾರದ ಅಥವಾ ವಶದಲ್ಲಿಟ್ಟುಕೊಳ್ಳಲಾಗದ ಪೂರ್ವಾಗ್ರಹೀತ ವಸ್ತು ವಿಚಾರಗಳನ್ನು ಹೊರಗೆಳೆಯಬೇಕಾಗಿದೆ. ಇತಿಹಾಸದ ಸಾಮಾನ್ಯೀಕೃತ ಅಭಿಪ್ರಾಯಗಳನ್ನು ಹೇರಲು ಬರುವ ಅಧಿಕಾರ ಕೇಂದ್ರಗಳಿಗೆ ಸರಿಯಾದ ತಾತ್ವಿಕ ಪೆಟ್ಟು ಹಾಕಿ ತಕ್ಕ ಪ್ರತಿರೋಧಕ ಹೊಡೆತಗಳನ್ನು ಹೊಡೆಯಬೇಕಾಗಿದೆ. ಇದರಿಂದ ಅವರ 'ಸಾಮಾನ್ಯಸ್ಥಿತಿ' 'ಕ್ರಮಬದ್ಧತೆ' ಮತ್ತು 'ಮೂಲ' ಮೊದಲಾದ ಮಾನವೀಯ ಕಲ್ಪನೆಗಳ ಹಿಂದಿರುವ ಫ್ಯಾಸಿಸ್ಟ್ ಧೋರಣೆಯನ್ನು ನಿರಂತರವಾಗಿ ಬಯಲು ಮಾಡುವ ಮೂಲಕ ಪೂರ್ವದ ಕುರಿತ ಹಾಲಿ ವ್ಯಾಖ್ಯಾನಗಳ ವ್ಯಾಪ್ತಿ ಇನ್ನಷ್ಟು ಹಿಗುತ್ತದೆ. ಈ ಮೂಲಕ ವಸಾಹತೋತ್ತರ ಸಾಂಸ್ಕೃತಿಕ ಆಚಾರ ವಿಚಾರದ ವಲಯಕ್ಕೆ ಮತ್ತು ವಸಾಹತುವಾದಿ ಸಂಕಥನ ವಿಶ್ಲೇಷಣೆಗೆ ಒಂದು ಸೈದ್ಧಾಂತಿಕ ಗೌರವಾರ್ಹತೆಯೂ ಒದಗುತ್ತದೆ."[೧೧] ಈ ಹಿನ್ನೆಲೆಯಲ್ಲಿ ಸಂಕೀರ್ಣ ಸಮಾಜದ ವಾಸ್ತವಗಳನ್ನು ಹಾಗೂ ಇತಿಹಾಸದ ಸ್ಥಾಪಿತ ಸಾಂಸ್ಕೃತಿಕ ರಾಜಕಾರಣವನ್ನು ಸಮಕಾಲೀನ ನೆಲೆಯಲ್ಲಿ ವಿವೇಚನೆಗೆ ಒಳಪಡಿಸಬೇಕು ಎಂಬುದು ಸೈದ್‌ನ ಚಿಂತನೆಯಾಗಿದೆ.

ಒಟ್ಟಿನಲ್ಲಿ ಸೈದ್‌ನ ಚಿಂತನೆಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಅಧಿಕಾರ ಮತ್ತು ನಿಯಂತ್ರಣವನ್ನಾಧರಿಸುವ ರಾಜಕೀಯ ಸ್ವರೂಪದ್ದಾಗಿದೆ. ಆತನ 'ಪೌರಸ್ತ್ಯವಾದ'ದ ಚಿಂತನೆಗಳು ಮುಖ್ಯವಾಗಿ ಸಾಂಸ್ಕೃತಿಕ ಯಾಜಮಾನ್ಯದ ಅಧ್ಯಯನವನ್ನು ಪ್ರಭಾವಿಸುತ್ತವೆ. ವಸಾಹತೋತ್ತರ ಚಿಂತನೆಗೆ

ಒಂದು ಶಿಸ್ತುಬದ್ಧ ತಾತ್ತ್ವಿಕ ತಳಹದಿಯನ್ನು ಕೊಟ್ಟು, ಅದನ್ನೊಂದು ಪ್ರಮುಖ ರಾಜಕೀಯ–ಸಾಂಸ್ಕೃತಿಕ–ಸಾಹಿತ್ಯದ ವಿಶ್ಲೇಷಣೆಯ ಪ್ರಸ್ಥಾನವನ್ನಾಗಿ ಸೈದ್ ರೂಪಿಸಿದ್ದಾನೆ.

- **ಗ್ರಾಮ್ಷಿಯ ಯಾಜಮಾನ್ಯದ ಸ್ವರೂಪ**

ಪ್ರಸಿದ್ಧ ಮಾರ್ಕ್ಸ್‌ವಾದಿ ಹಾಗೂ ಸಾಂಸ್ಕೃತಿಕ ಚಿಂತಕ ಅಂಟೋನಿಯೋ ಗ್ರಾಮ್ಷಿ (1891–1937) ಮೊದಲ ಬಾರಿಗೆ ಯಾಜಮಾನ್ಯ (ಹೆಜಮೊನಿ) ಎಂಬ ಪರಿಕಲ್ಪನೆಯನ್ನು ರೂಪಿಸಿದವನು. ಹೆಜಮೊನಿ ಎಂಬ ಪದವನ್ನು 'ಸರ್ವಾಧಿಕಾರ' ಎಂಬ ವಿಶಾಲಾರ್ಥದಲ್ಲಿ ಬಳಸಿದನು. ಈತನ ಪ್ರಕಾರ ಹೆಜಮೊನಿಗೆ ಪ್ರಾಬಲ್ಯ, ಅಧಿಕಾರ, ಸಾರ್ವಭೌಮತ್ವ ಮೊದಲಾದ ಅರ್ಥಗಳು ಇವೆ.

ಗ್ರಾಮ್ಷಿಯ ಸಿದ್ಧಾಂತದ ಪ್ರಕಾರ 'ಯಾಜಮಾನ್ಯ' ಎಂದರೆ ಬಹುಸಂಖ್ಯಾತ ಜನಸಮುದಾಯವನ್ನು ಸಹಮತ ಹಾಗೂ ಬಲಪ್ರಯೋಗಳ ಮೂಲಕ, ಅವರ ಸಹಕಾರದೊಂದಿಗೆ ಆಳುವುದು. ಸದಾ ಅಧಿಕಾರ ಚಲಾಯಿಸುತ್ತಿರಲು ಅವರಿಂದಲೇ ಒಪ್ಪಿಗೆಯನ್ನು ಪಡೆಯುವ ಅಲ್ಪ ಜನಗಳ ನಿರ್ದಿಷ್ಟ ಗುಂಪೊಂದರಹುನ್ನಾರ.' ಎಂದು ಅಧಿಕಾರ ವರ್ಗಗಳ ಹುನ್ನಾರಗಳನ್ನು ಬಹಳ ಸೂಕ್ಷ್ಮವಾಗಿ ಬಯಲಿಗೆಳೆಯುತ್ತಾನೆ.[೧೨]

ಯಾಜಮಾನ್ಯ ಎನ್ನುವುದು ನಿರಂತರವಾಗಿ ನಡೆಯುವ ಪ್ರಕ್ರಿಯೆ. ಈ ಪ್ರಕ್ರಿಯೆಯ ಮೂಲಕ ಆಳುವ ಅಥವಾ ಪ್ರಧಾನ ವರ್ಗಗಳು ಅಥವಾ ಆ ವರ್ಗಗಳ ಘಟಕಗಳು ಸಾಮಾಜಿಕ ಸಂಸ್ಥೆಗಳ ಜೊತೆಗೆ ತಮಗಿರುವ ಅನುಕೂಲಕರ ಸಾಮಿಪ್ಯದಿಂದಾಗಿ ಯಾಜಮಾನ್ಯ ಸ್ಥಾಪಿಸುತ್ತವೆ. ಉದಾಹರಣೆಗೆ : ಮಾಧ್ಯಮ, ಶಿಕ್ಷಣ, ಕುಟುಂಬ, ಧಾರ್ಮಿಕ ಸಂಸ್ಥೆಗಳ ಮೂಲಕ ಕೆಲವು ಮೌಲ್ಯಗಳನ್ನು ಪ್ರಸ್ಥಾಪಿಸುತ್ತಾ ರಾಜಕೀಯ ಮತ್ತು ಆರ್ಥಿಕತೆಯ ಮೇಲೆ ತಮ್ಮ ನಿಯಂತ್ರಣವನ್ನು ಸ್ಥಾಪಿಸುತ್ತವೆ. ಈ ಮೌಲ್ಯಗಳೇ ಒಂದು ಕಾಲದ ಆಳುವ ವರ್ಗದ ತಾತ್ವಿಕತೆಗಳಾಗುತ್ತವೆ. ತತ್ವಾದರ್ಶದ ಸಾಧನಗಳ ಮೂಲಕ ತಮ್ಮ ಪ್ರಾಬಲ್ಯವನ್ನು ಅಥವಾ ಯಾಜಮಾನ್ಯವನ್ನು ಸಾಧಿಸುತ್ತಿರುತ್ತವೆ. ಪ್ರಭುತ್ವಕ್ಕೆ ಒಳಪಟ್ಟ ವರ್ಗಗಳ ಸಹಮತವನ್ನು ಸಂಪಾದಿಸಲು ತತ್ವಾದರ್ಶದ ಪಾತ್ರವು ಹೆಚ್ಚು ಮಹತ್ವದ್ದಾಗಿದೆ ಎಂಬುದು ಆತನ ಪ್ರತಿಪಾದನೆ. ಆದರೆ, ಸಿದ್ಧಾಂತ ಅಥವಾ ತತ್ವಾದರ್ಶಗಳು ಹೆಜಮೊನಿಯಾಗಿ ರೂಪುಗೊಳ್ಳುವುದನ್ನು ಗ್ರಾಮ್ಷಿ ತಿಳಿಸುತ್ತಾನೆ.

ಗ್ರಾಮ್ಷಿಯ ಯಾಜಮಾನ್ಯ ಸಂಕಥನವು ಎರಡು ಬಗೆಯ ಅಧಿಕಾರವನ್ನು ತಿಳಿಸುತ್ತದೆ. ಒಂದು ತೋಳ್ಬಲದ ಆಳ್ವಿಕೆ (ರೂಲ್ ಬೈ ಫೋರ್ಸ್), ಎರಡನೆಯದು ಜನಸಮ್ಮತಿಯ ಆಳ್ವಿಕೆ (ರೂಲ್ ಬೈ ಕನ್ಸೆಂಟ್), ಈ ಎರಡೂ ನಮೂನೆಯ ಅಧಿಕಾರಗಳು ಮೇಳೈಸಿದರೆ ಆಳುವ ವರ್ಗಕ್ಕೆ ಸಮಾಜದಲ್ಲಿ ಯಾಜಮಾನ್ಯ ಸ್ಥಾಪಿಸಲು ಸಾಧ್ಯವಾಗುತ್ತದೆ. ಎಂಬುದನ್ನು ಗ್ರಾಮ್ಷಿಯ ಯಾಜಮಾಜನ್ಯ ಸಂಕಥನ ತಿಳಿಸುತ್ತದೆ. ಪ್ರಸಂಗ ಬಂದಾಗ ಜನಸಮ್ಮತಿಯನ್ನು ತೋಳ್ಬಲದ ಪ್ರದರ್ಶನಕ್ಕೆ ಸಮರ್ಥನೆಯಾಗಿ ಬಳಸಿಕೊಳ್ಳಬಹುದು; ತೋಳ್ಬಲವೇ ಆಳುವ ವರ್ಗದ ನಾಯಕತ್ವಕ್ಕೆ ಜನಸಮ್ಮತಿಯನ್ನು ದೊರಕಿಸಿಕೊಡುವ ಸಾಧನವೂ ಆಗಬಹುದು. ಯಾವುದೇ ವರ್ಗದ ಶಕ್ತಿಯು ಸಮಾಜದಲ್ಲಿ ಅದು ಗಳಿಸಿಕೊಂಡಿರುವ ಯಾಜಮಾನ್ಯವನ್ನು ಅವಲಂಬಿಸಿರುತ್ತದೆ. ಆದ್ದರಿಂದ ಗ್ರಾಮ್ಷಿಯ ಪ್ರಕಾರ ಬಲ ಮತ್ತು ಒಪ್ಪಿಗೆ ಒಂದನ್ನೊಂದು ಅವಲಂಬಿಸುತ್ತದೆ ಹಾಗೂ ಸಮನ್ವಯ ಸಾಧಿಸುತ್ತಿರುತ್ತದೆ.

ಹೀಗೆ ಗ್ರಾಮ್ಷಿ ತನ್ನ ಹಲವು ಭೌದ್ಧಿಕ ಹಾಗೂ ನೈತಿಕ ಪ್ರಜ್ಞೆಗಳ ಮೂಲಕ ಅಧಿಕಾರ, ಧರ್ಮ, ಅವೈಜ್ಞಾನಿಕ ವಿಚಾರ, ಸಿದ್ಧಾಂತಗಳ ಹಾಗೂ ದೇವರುಗಳ ಸಾಮ್ರಾಜ್ಯದ ಸೀಮೆಯಾಚೆಗೆ ಮನುಷ್ಯನ ಸ್ವಸಾಮರ್ಥ್ಯದ ಜಗತ್ತನ್ನು ನಿರ್ಮಿಸುತ್ತಾ ಸಾಮಾಜಿಕ ಜಾಗೃತಿಗೆ ಪ್ರೇರಣೆ ನೀಡಿದ್ದಾನೆ.

ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಪ್ರಸನ್ನ ಅವರ 'ತದ್ರೂಪಿ', 'ದಂಗೆಯ ಮುಂಚಿನ ದಿನಗಳು', 'ಮಹಿಮಾಪುರ', 'ಜಂಗಮದ ಬದುಕು', 'ಉಲಿ' ನಾಟಕಗಳಲ್ಲಿ ಸರ್ವಾಧಿಕಾರಿ, ವಸಾಹತುಶಾಹಿ, ಪುರೋಹಿತಶಾಹಿ, ಧರ್ಮ, ದೇವರು, ಜಾತಿ, ಪುರುಷಾಧಿಕಾರ ಹಾಗೂ ಜ್ಞಾನಾಧಿಕಾರ ಇವುಗಳ ರಾಜಕಾರಣದ ವಿವಿಧ ಮುಖಗಳನ್ನು ವಿವಿಧ ಅಧ್ಯಾಯಗಳಲ್ಲಿ ಚರ್ಚಿಸಿಕೊಳ್ಳಬಹುದಾಗಿದಾಗಿದೆ. ಹಾಗೆಯೇ ಈ ಶಕ್ತಿಕೇಂದ್ರಗಳ ಅಧಿಕಾರ, ನಿಯಂತ್ರಣ ಹಾಗೂ ಪ್ರತಿರೋಧಗಳ ವಿವಿಧ ನೆಲೆಗಳನ್ನು ಈ ಅಧ್ಯಯನ ಚರ್ಚಿಸುತ್ತದೆ. ಇವುಗಳು ಸಮಕಾಲೀನ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಂದರ್ಭಗಳಲ್ಲಿ ಉಂಟುಮಾಡಿದ ವಿವಿಧ ಬಗೆಯ ಬಿಕ್ಕಟ್ಟು ಹಾಗೂ ಪಲ್ಲಟಗಳನ್ನು ಈ ಅಧ್ಯಯನ ಗುರುತಿಸಲು ಯತ್ನಿಸುತ್ತದೆ.

**ಕೊನೆ ಟಿಪ್ಪಣಿ :**

೧. ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯತೆ, ಹಾಗೂ ಅಧಿಕಾರಕೇಂದ್ರಗಳ ಪ್ರತಿನಿಧೀಕರಣ : ಪಿಎಚ್.ಡಿ. ಮಹಾಪ್ರಬಂಧ : ಟಿ.ವೆಂಕಟೇಶಮೂರ್ತಿ : ೨೦೦೫, ಪುಟ – ೭

೨. ಅದೇ ಪುಟ – ೯

೩. ಅದೇ ಪುಟ – ೧೧

೪. ಅದೇ ಪುಟ – ೧೨

೫. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ : ನಟರಾಜ್ ಹುಳಿಯಾರ್ : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ – ೧೦

೬. ಅದೇ, ಪುಟ – ೧೯

೭. ಅದೇ, ಪುಟ – ೧೧

೮. ಸಾಹಿತ್ಯ ಕಥನ : ಡಿ.ಆರ್.ನಾಗರಾಜ್ : ಅಕ್ಷರ ಪ್ರಕಾಶನ : ೧೯೯೬, ಪುಟ – ೧೪೪

೯. ಎಡ್ವರ್ಡ್ ಸೈದ್ : ಸಿ.ಎನ್.ರಾಮಚಂದ್ರನ್ : ಕನ್ನಡ ಪುಸ್ತಕ ಪ್ರಾದಿಕಾರ : ೨೦೦೩, ಪುಟ – ೧೬

೧೦. ವಸಾಹತೋತ್ತರ ಚಿಂತನೆ :ಸಿ.ಎನ್.ರಾಮಚಂದ್ರನ್:ಕನ್ನಡ ಪುಸ್ತಕ ಪ್ರಾದಿಕಾರ:೨೦೦೩, ಪುಟ–೪೫, ೪೬

೧೧. ಅದೇ, ಪುಟ – ೪೨, ೪೩

೧೨. ಎಡ್ವರ್ಡ್ ಸೈದ್ ಅಂಡ್ ದಿ ರೀಡಿಂಗ್ ಆಫ್ ಹಿಸ್ಟರಿ : ಶೆಲ್ಲಿವಾಲಿಯ : ಪುಟ – ೨೯

# ಅಧ್ಯಾಯ–೨

## ಸರ್ವಾಧಿಕಾರದ ಒಳ-ಹೊರಗುಗಳ ಸಂಘರ್ಷ

ಪ್ರಸನ್ನ ಅವರ 'ತದ್ರೂಪಿ' ನಾಟಕ ಹತ್ತೊಂಬತ್ತನೆ ಶತಮಾನದ ಬೆರ್‌ಚಿಲಿ ಎಂಬ ಕಾಲ್ಪನಿಕ ದೇಶದಲ್ಲಿನ ಸರ್ವಾಧಿಕಾರಿಯ ಸುತ್ತ ಹೆಣೆದ ಕಥಾನಕ. ಕನ್ನಡ ನಾಟಕ ಪ್ರಕಾರಕ್ಕೆ ಆಧುನಿಕ ಸಂವೇದನೆಯನ್ನ ಬಹಳ ಗಟ್ಟಿಯಾಗಿ ಒತ್ತಿ ಹೇಳುವ ಈ ನಾಟಕ ಐತಿಹಾಸಿಕ ವಾತಾವರಣದ ಭಿತ್ತಿಯಲ್ಲಿ ಸಮಕಾಲೀನ ವಾಸ್ತವತೆಯ ಕಠೋರ ಸತ್ಯಗಳನ್ನು ಮಂಡಿಸುತ್ತದೆ. ಇದೊಂದು ಸರ್ವಾಧಿಕಾರತ್ವದ ಪರಮಾಧಿಕಾರವನ್ನ ಹಾಗೂ ಸರ್ವಾಧಿಕಾರಿಯೊಬ್ಬನ ಮನೋವ್ಯಾಪಾರವನ್ನ ಬಿಂಬಿಸುವ ನಾಟಕವಾಗಿದೆ. ಇದು ಲ್ಯಾಟಿನ್ ಅಮೆರಿಕಾದ ಕಾದಂಬರಿಕಾರ ಗೇಬ್ರಿಯಲ್ ಗಾರ್ಸಿಯ ಮಾರ್ಕ್ವೆಸ್‌ನ 'An Autumn of Patriarch' ಎಂಬ ಕಾದಂಬರಿಯ ಪ್ರಭಾವದಿಂದ ರಚಿತವಾದದ್ದು ಎಂದು ನಾಟಕಕಾರ ಪ್ರಸನ್ನ ಅವರು ತಿಳಿಸುತ್ತಾರೆ. ಅಷ್ಟೇ ಅಲ್ಲದೆ 'ತದ್ರೂಪಿ' ನಾಟಕದ ವಸ್ತು ಚಾರ್ಲಿ ಚಾಪ್ಲಿನ್ ಅವರ 'The Great dictator' ಮತ್ತು 'Kurosavana' ಕೃತಿಗಳ ವಸ್ತುವನ್ನು ಹೋಲುತ್ತದೆ ಎಂದು ತಿಳಿಸಿದ್ದಾರೆ.

'ತದ್ರೂಪಿ' ನಾಟಕ ಚರಿತ್ರೆಯಲ್ಲಿನ ಸರ್ವಾಧಿಕಾರಿ ಪ್ರಭುತ್ವದ ನಿರಂಕುಶ ಆಡಳಿತ, ಉಗ್ರ ರಾಷ್ಟ್ರೀಯತೆ, ಏಕಸ್ವಾಮ್ಯತೆ, ದಬ್ಬಾಳಿಕೆ, ಹಿಂಸೆ ಮತ್ತು ಅದಕ್ಕೆ ಸ್ಥಳೀಯ ಜನ ಸಮುದಾಯ ಒಡ್ಡುವ ಪ್ರತಿಕ್ರಿಯೆಗಳು ಎಂಥಹವು ಎಂಬುದನ್ನು ಸೂಕ್ಷ್ಮವಾಗಿ ಬಯಲಿಗೆಳೆಯುತ್ತಾ ಸಾಗುತ್ತದೆ. ಆ ಮೂಲಕ ಸಮಕಾಲೀನ ರಾಜಕಾರಣದ ಆಗು-ಹೋಗುಗಳಿಗೆ ಕನ್ನಡಿ ಹಿಡಿಯುವ ಪ್ರಯತ್ನ ನಡೆದಿದೆ. ಆ ಕಾರಣಕ್ಕಾಗಿ ಹೇಮಾ ಪಟ್ಟಣ ಶೆಟ್ಟಿಯವರು 'ತದ್ರೂಪಿ' ನಾಟಕ "ಭೂತದ ಕೈಗನ್ನಡಿಯಲ್ಲಿ ವಾಸ್ತವವನ್ನೂ ಸಮಕಾಲೀನ ರಾಜಕಾರಣವನ್ನೂ ತಿಳಿಯುವ ಪ್ರಯತ್ನವಾಗಿದೆ."[೧] ಎಂದು ಅಭಿಪ್ರಾಯಿಸುತ್ತಾರೆ.

'ತದ್ರೂಪಿ' ನಾಟಕದ ಸರ್ವಾಧಿಕಾರಿಯಾದ ಜನರಲ್ ಪೋಪಟ್ ತನ್ನ ಧೈರ್ಯ, ಸ್ಥೈರ್ಯ, ಚತುರತೆಗಳಿಂದ ರಾಜ್ಯದಲ್ಲಿ ನಿರಂಕುಶಪ್ರಭುತ್ವವನ್ನು ಉಗ್ರರಾಷ್ಟ್ರೀಯತಾ ಭಾವವನ್ನು ನೆಲೆಗೊಳಿಸಿದ್ದಾನೆ. ರಾಜ್ಯದ ರಾಜಕೀಯ ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನ ಅಧಿಪತ್ಯವನ್ನು ಸ್ಥಾಪಿಸಿಕೊಂಡಿದ್ದಾನೆ.

"ಬೆರ್‌ಚಿಲಿ ದೇಶದ ಅಧ್ಯಕ್ಷನೂ, ಈ ದೇಶದ ಸಂಸತ್ತಿನ
ಪ್ರಧಾನ ಮಂತ್ರಿಯೂ, ವಿತ್ತ ಮಂತ್ರಿಯೂ, ಯುದ್ಧ
ಮಂತ್ರಿಯೂ, ಗೃಹ ಮಂತ್ರಿಯೂ, ಆದ ಹಾಗೂ
ನಮ್ಮ ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಾಧೀಶನೂ
ಆದ ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಎಲ್ಲ ಸೇನೆಗಳ
ಮಹಾನ್ ದಂಡನಾಯಕನೂ ಆಗಿರುವ ನಾನು ಮಾತನಾಡುತ್ತಿದ್ದೇನೆ."[೨]

ಎಂಬ ಜನರಲ್ ಪೋಪಟ್ ಮಾತುಗಳು ನಾಟಕದ ಪ್ರಾರಂಭದ ದೃಶ್ಯದಲ್ಲಿ ರಂಗದ ಮಧ್ಯೆ ಧ್ವನಿ ಸುರುಳಿಯ ಮೂಲಕ ನಿರಂತರವಾಗಿ ಮೂಡಿಬರುತ್ತದೆ. ಇವನು ತನ್ನ ಸಾಮರ್ಥ್ಯದಿಂದ ಇಡೀ ರಾಜ್ಯದಲ್ಲಿ ಸರ್ವಾಧಿಕಾರತ್ವವನ್ನು ಸ್ಥಾಪಿಸಿರುವುದು ನಮಗೆ ಮನವರಿಕೆಯಾಗುತ್ತದೆ. ಇವನ ಮಾತುಗಳಲ್ಲಿ ಅವನಲ್ಲಿ ನೆಲೆಗೊಳಿಸಿರುವ ಅಹಂ ಭಾವವೂ ಮತ್ತು ಸಮಾಜದ ಅತ್ಯಂತ ತಳ ಅಧಿಕಾರ ಕೇಂದ್ರಗಳ ಮೇಲೂ ಅವನು ಸಾಧಿಸಿರುವ ನಿಯಂತ್ರಣವನ್ನೂ ಗುರುತಿಸಬಹುದಾಗಿದೆ. ಇಂಥ ಸರ್ವಾಧಿಕಾರ ಕೇವಲ ರಾಜ್ಯಾಡಳಿತದ ಅಧಿಕಾರ ಕೇಂದ್ರಗಳಲ್ಲಿ ಮಾತ್ರವಲ್ಲದೆ ಅಲ್ಲಿಂದ ಮುಂದುವರೆದು ವ್ಯಕ್ತಿಯ ವೈಯಕ್ತಿಕ ಬದುಕನ್ನೂ ಆವರಿಸಿಕೊಂಡಿದೆ. ದೇಶದ ಜನಸಾಮಾನ್ಯರು, ಸಾಹಿತಿಗಳು, ಬುದ್ಧಿಜೀವಿಗಳು, ಮಕ್ಕಳು ಹೀಗೆ ಪ್ರತಿಯೊಬ್ಬರ ಖಾಸಗಿ ಬದುಕಿನ ಮೇಲೂ ನಿಯಂತ್ರಣವನ್ನು ಸಾಧಿಸಿದ್ದಾನೆ.

ಸರ್ವಾಧಿಕಾರಿ ಪ್ರಭುತ್ವ ಎಲ್ಲಾ ತಳ ಅಧಿಕಾರ ಕೇಂದ್ರಗಳ ಮೇಲೆ ನಿಯಂತ್ರಣವನ್ನು ಸಾಧಿಸುವುದಷ್ಟೇ ಅಲ್ಲದೆ ಅಂಥ ನಿಯಂತ್ರಣವನ್ನು ಜನ ಸಮುದಾಯ ಹಾಡಿ ಹೊಗಳಬೇಕೆಂದು ಬಯಸುತ್ತದೆ. ಅದಕ್ಕಾಗಿಯೇ ತನ್ನ ಸುತ್ತ ಹಲವಾರು ಭಟ್ಟಂಗಿಗಳನ್ನು ಸೃಷ್ಟಿಸಿಕೊಂಡು ಪೋಷಿಸುತ್ತಿರುತ್ತದೆ. ಆದರೆ ಸರ್ವಾಧಿಕಾರಿ ಪ್ರಭುತ್ವವನ್ನು ಭಟ್ಟಂಗಿತನವನ್ನೂ ವಿರೋಧಿಸುವ ಬುದ್ಧಿಜೀವಿ ವರ್ಗಗಳು ಲೋಕದಲ್ಲಿ ಇರುತ್ತವೆ. ಅಂಥ ವಿರೋಧಿಗಳನ್ನೂ ಸರ್ವಾಧಿಕಾರಿ ಪ್ರಭುತ್ವ ತನ್ನ ಬಂಧನದಲ್ಲಿಟ್ಟುಕೊಂಡು ಪೋಷಿಸುತ್ತದೆ, ಆ ಮೂಲಕ ಅವರ ಮೇಲೆ ನಿಯಂತ್ರಣವನ್ನು ಸಾಧಿಸುತ್ತಿರುತ್ತದೆ. ಜೊತೆಗೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ಹಾಡಿ ಹೊಗಳುವಂತೆ ಒತ್ತಾಯಪೂರ್ವಕವಾಗಿ ಅವರ ಮೇಲೆ ಹೇರುತ್ತದೆ. ಸರ್ವಾಧಿಕಾರ ಜನರಲ್ ಪೋಪಟ್ ಸಹ ರಾಜ್ಯದ ಹಲವಾರು ಬುದ್ಧಿಜೀವಿ ವರ್ಗಗಳನ್ನು ತನ್ನ ಬಂಧನದಲ್ಲಿರಿಸಿಕೊಂಡು ಅವರಿಂದ ಬಲವಂತವಾಗಿ ಕಾವ್ಯಗಳನ್ನು ರಚಿಸಲು ಆದೇಶಿಸುತ್ತಾನೆ. ಹಾಗೆ ರಚನೆಯಾದ ಒಂದು ಕಾವ್ಯಗಳನ್ನು ಪ್ರತಿದಿನ

ಪ್ರಾರ್ಥನೆಯಲ್ಲಿ ಎಲ್ಲರೂ ಹಾಡಲೇಬೇಕೆಂದು ಆಜ್ಞೆಯನ್ನೂ ಸಹ ಹೊರಡಿಸುತ್ತಾನೆ. ಆ ಮೂಲಕ ಎಲ್ಲರ ಮನದಲ್ಲಿಯೂ ತನ್ನ ಸ್ತುತಿ ನೆಲೆಸುವುದು ಅವನ ಯೋಜನೆಯಾಗಿರುತ್ತದೆ. ಇದರಿಂದ ಅವನ ಜನಪ್ರಿಯತೆಯನ್ನು ಹೆಚ್ಚಿಸಿಕೊಳ್ಳುವ ಹುನ್ನಾರವೂ ಆಗಿದೆ.

ಸರ್ವಾಧಿಕಾರಿ ಜನರಲ್ ಪೋಪಟ್ ತನ್ನ ಸ್ತುತಿಗಳ ಮೂಲಕ ಜನಪ್ರಿಯತೆಯನ್ನು ಗಳಿಸುವುದಷ್ಟೇ ಅಲ್ಲದೆ ಜನಸಮುದಾಯದ ಮನೆ ಗೋಡೆಗಳ ಮೇಲೆ ಮತ್ತು ಎಲ್ಲಾ ಶಾಲಾ ವಿದ್ಯಾರ್ಥಿಗಳ ಸಮವಸ್ತ್ರಗಳ ಮೇಲೆ ಅವನ ಛಾಯಾ ಚಿತ್ರವನ್ನು ಮೂಡಿಸಬೇಕೆಂದು ಆಜ್ಞೆ ಹೊರಡಿಸುತ್ತಾನೆ. ಆ ಮೂಲಕ ದೇಶದ ಸಣ್ಣ-ಪುಟ್ಟ ಖಾಸಗೀವಲಯಗಳಿಂದ ಹಿಡಿದು ಬೃಹತ್ ಸಾರ್ವಜನಿಕ ವಲಯಗಳ ವರೆಗೆ ತನ್ನ ನಿರಂಕುಶಾಧಿಕಾರತ್ವವನ್ನು ಸ್ಥಾಪಿಸುತ್ತಾನೆ. ದೇಶದ ಎಲ್ಲಾ ಎಳೆಯ ಮುಗ್ಧಚೇತನಗಳಿಂದ ಹಿಡಿದು ಎಲ್ಲಾ ಬುದ್ಧಿಜೀವಿ ವರ್ಗಗಳ ಮೇಲೂ ಸರ್ವಾಧಿಕಾರತ್ವವನ್ನು ಸ್ಥಾಪಿಸುತ್ತಾನೆ ಮತ್ತು ಹೆಚ್ಚು ಜನಪ್ರಿಯನಾಗಲು ಬಯಸುತ್ತಾನೆ.

ನಿರಂಕುಶಾಡಳಿತ, ಉಗ್ರರಾಷ್ಟ್ರೀಯತೆ, ಸರ್ವಾಧಿಕಾರ ಮುಂತಾದ ಪರಿಕಲ್ಪನೆಗಳು ಸಾರ್ವಜನಿಕ ಬದುಕಿಗೆ ಸಂಬಂಧಿಸಿದ ರಾಜಕೀಯ ಸಂಗತಿಗಳು. ಆದರೆ ಈ ಸಾರ್ವಜನಿಕ ಮತ್ತು ಸಾರ್ವಕಾಲಿಕ ವ್ಯವಸ್ಥೆ ಮನುಷ್ಯನ ಖಾಸಗೀ ಬದುಕನ್ನೂ ನಿಯಂತ್ರಿಸುವುದು ಅಸಹನೀಯವಾದಂತದ್ದು. ಹಾಗಾಗಿಯೇ ಇಂಥ ನಿಯಂತ್ರಣಗಳನ್ನು ಬೆರ್‌ಚಲಿ ದೇಶದ ಸ್ತ್ರೀ ಪ್ರತಿರೋಧಿಸುತ್ತಾಳೆ.

"ಆ ದರಿದ್ರ ಮುಸುಡೀನ ಮಕ್ಕಳ ಅಂಗೀ ಮೇಲೆಲ್ಲಾ
ಚುಚ್ಚಿ ಕಳಿಸಿದಾರೆ ನೋಡಿ"
"ಆ ಹಾಳಾದೋನ ಚಿತ್ರ ಮನೆ ಗೋಡೆ ಮೇಲೆ ಸಾಕಾಗಿತ್ತು
ಅಂದರೆ ಮಕ್ಕಳ ಅಂಗೀ ಮೇಲೆಲ್ಲಾ ಸಿಕ್ಕಿಸಿದಾರೆ ನೋಡಿ."
"ನನಗಂತೂ ರೋಸಿ ಹೋಗಿದೆ. ರೇಡಿಯೋ ಹಾಡದರೆ
ಅವನ ಪುರಾಣ. ಪಿಕ್ಚರ್‌ಗೆ ಹೋದರೆ ಅವನ ಪುರಾಣ.
ಟಿ.ವಿ. ತಿರುಗಿಸಿದರೆ ಅಲ್ಲೂ ಅವನ ಮುಖವೇ"[3]

ಸರ್ವಾಧಿಕಾರಿ ಪ್ರಭುತ್ವ ದೇಶದ ಎಲ್ಲಾ ವಲಯವನ್ನು ಆಕ್ರಮಿಸಿಕೊಂಡು ಜನರ ಸ್ವತಂತ್ರ ಬದುಕಿನ ಮೇಲೆ ನಿಯಂತ್ರಣವನ್ನು ಸಾಧಿಸಿರುವುದನ್ನು ಧಿಕ್ಕರಿಸುತ್ತಾಳೆ 'ಅವಳು'. ಆದರೆ ಅವಳ ಪ್ರತಿಭಟನೆಯನ್ನು ಆಕೆಯ ಗಂಡ ತಡೆಯುತ್ತಾನೆ. ಹಾಗೆ ವ್ಯವಸ್ಥೆಯ ವಿರುದ್ಧ ದನಿ ಎತ್ತುವುದು ಅಪಾಯದ ಆಹ್ವಾನ ಎಂದು ಅವಳನ್ನು ತಡೆಯುತ್ತಾನೆ. ಮನುಷ್ಯನ ಅಂತರಂಗದಲ್ಲಿನ ಇಂಥ ಭಯ, ಅಂಜಿಕೆ, ಹೇಡಿತನ, ಅಸಹಾಯತೆಗಳೇ ಪ್ರಬಲ ಶಕ್ತಿಗಳು ಇನ್ನಷ್ಟು ಪ್ರಬಲ ಹೊಂದಲು ಅನುವು ಮಾಡಿಕೊಡುವಂತಹವುಗಳು. ಮತ್ತೊಂದು ಹಂತದಲ್ಲಿ ವ್ಯವಸ್ಥೆಯ ಬಗೆಗೆ ಮೌನವಹಿಸುವುದೂ ಕೂಡ ಒಂದು ಬಗೆಯ ಪ್ರತಿಭಟನೆಯೇ ಆಗಿರುತ್ತದೆ. ಅದನ್ನೆ ಜೇಮ್ಸ್ ಜಾಯ್ಸ್ ಅವರು ಲೇಖಕರನ್ನು ಕುರಿತು ಮಾತನಾಡುವಾಗ "ವ್ಯವಸ್ಥೆಯ ವಿರುದ್ಧ ಹೋರಾಡಲು ಮತ್ತು ತನ್ನ ಪ್ರಾಮಾಣಿಕತೆಯನ್ನು ಉಳಿಸಿಕೊಳ್ಳಲು ಮೂರು ಮಾರ್ಗಗಳಿವೆ. ಅವು ಮೌನವಾಗಿರುವುದು(silence), ಭೂಗತವಾಗಿರುವುದು(exile), ಉಪಾಯಗಾರನಾಗಿರುವುದು(cunning)."[೪] ಎಂದು ತಿಳಿಸಿದ್ದಾರೆ. ಹಾಗೆಯೇ ಆಕೆಯ ಗಂಡ ಕೂಡ ವ್ಯವಸ್ಥೆಯೊಂದಿಗೆ ಮೌನವಾಗಿ ಪ್ರತಿಭಟಿಸುತ್ತಿರುವುದನ್ನು ಗಮನಿಸಬಹುದು.

ಒಂದು ಕಡೆ ಹೀಗೆ ವ್ಯವಸ್ಥೆಯ ಜೊತೆಗೆ ಇದ್ದುಕೊಂಡು ಮೌನವಾಗಿ ಪ್ರತಿಭಟಿಸಿದರೆ ಮತ್ತೊಂದು ಕಡೆ ವ್ಯವಸ್ಥೆಯಿಂದ ದೂರ ಇದ್ದುಕೊಂಡು ವಿದ್ರೋಹ ರೂಪಿಸುವಂತಹದ್ದು ನಾಟಕದ ಮುಖ್ಯ ಘಟ್ಟಗಳಲ್ಲಿ ಒಂದು. ಬೆರ್‌ಚಿಲಿ ದೇಶದ ಸಾಮಾನ್ಯ ವರ್ಗಕ್ಕೆ ಸೇರಿದ ಚೀಟ್, ಗುರು ಮತ್ತು ರಾಜ ಎಂಬ ಮೂವರು ಸರ್ವಾಧಿಕಾರಿ ಜನರಲ್ ಪೋಪಟ್‌ನ ಪ್ರತಿಬಿಂಬದಂತೆ ಇದ್ದ ಸಾಮಾನ್ಯ ಕ್ಷೌರಿಕನನ್ನು ಉಪಯೋಗಿಸಿಕೊಂಡು ವ್ಯವಸ್ಥೆಯ ವಿರುದ್ಧ ಸಂಚೊಂದನ್ನು ರೂಪಿಸುತ್ತಾರೆ.

> "ಸರ್ವಾಧಿಕಾರಿ ಜನರಲ್ ಪೋಪಟ್ ಒಂದೇ ಸಮಯದಲ್ಲಿ
> ಅನೇಕ ಕಡೆ ಕಾಣಿಸಿಕೊಳ್ಳುತ್ತಾರೆ. ಅವರೊಂದು ಪವಾಡ.
> ಅವರಿಗೆ ಅಲೌಕಿಕ ಶಕ್ತಿ ಇದೆ.......ಅವರು ಸಾವಿಲ್ಲದ
> ನಾಯಕ............. "[೫]

ಹೀಗೆ ಸರ್ವಾಧಿಕಾರಿ ಜನರಲ್ ಪೋಪಟ್‌ನ ಬಗೆಗೆ ಜನರಲ್ಲಿ ಹಲವಾರು ಪ್ರತೀತಿಗಳು ನೆಲೆಗೊಂಡಿದ್ದವು. ಇದೇ ಪ್ರತೀತಿಗಳನ್ನು ಉಪಯೋಗಿಸಿಕೊಂಡು ಚೀಟ್, ಗುರು ಮತ್ತು ರಾಜ 'ಪೋಪಟ್

ಪರಹಿತ ಟ್ರಸ್ಟ್' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿ ದೇಶದ ನಾನಾ ಕಡೆಗಳಲ್ಲಿ ಶ್ರೀಮಂತರಿಂದ ಹಣ ವಸೂಲಿ ಮಾಡುತ್ತಿದ್ದರು. ಇವರ ವಂಚನೆಗೆ ಸಮರ್ಪಕವಾಗಿ ನೆರವಾದವನು ಸರ್ವಾಧಿಕಾರಿಯ ಪ್ರತಿಬಿಂಬದಂತೆ ಇದ್ದಂತಹ ಸಾಮಾನ್ಯ ಕ್ಷೌರಿಕ 'ತದ್ರೂಪಿ'. ಹೀಗೆ ಇವರು ಜನರನ್ನ ಮೋಸಗೊಳಿಸಿ ಹಣ ಸಂಗ್ರಹಣೆ ಮಾಡುತ್ತಿರುವುದು ತಮ್ಮ ಸ್ವಾರ್ಥ ಸಾಧನೆಗಾದರೂ ಆ ಮೂಲಕ ಸರ್ವಾಧಿಕಾರಿ ಜನರಲ್ ಮೋಪಟ್ ಕೇವಲ ನಿರಂಕುಶಾಧಿಕಾರಿ, ಉಗ್ರರಾಷ್ಟ್ರೀಯತಾವಾದಿ ಮಾತ್ರವಲ್ಲ, ಬದಲಿಗೆ ವಂಚಕ ಮತ್ತು ಮೋಸಗಾರ ಎಂದು ಜನರಿಗೆ ತಿಳಿಸುವ ಯೋಜನೆಯೂ ಆಗಿದ್ದಿತು. ಜನರಲ್ಲಿ ಸರ್ವಾಧಿಕಾರಿ ಬಗೆಗೆ ಇನ್ನಷ್ಟು ಅಪನಂಬಿಕೆ ಮತ್ತು ಆಕ್ರೋಶಗಳನ್ನು ಹೆಚ್ಚಿಸುವ ತಂತ್ರವೂ ಆಗಿದ್ದಿತು. ಆ ಮೂಲಕ ದೇಶದಲ್ಲಿ ಸರ್ವಾಧಿಕಾರಿಯ ಪ್ರಾಬಲ್ಯಕ್ಕೆ ಕುಂದುಂಟುಮಾಡುವ ಪ್ರಕ್ರಿಯೆಯೂ ಆಗಿದ್ದಿತು.

ಆದರೆ ನಿರಂಕುಶಪ್ರಭು, ಉಗ್ರರಾಷ್ಟ್ರೀಯತಾವಾದಿ, ಏಕಚಕ್ರಾಧಿಪತಿಯಾಗಿದ್ದ ಜನರಲ್ ಮೋಪಟ್ ಚತುರನು, ಚಾಣಾಕ್ಷನೂ, ಸಮಯಪ್ರಜ್ಞನೂ ಆಗಿದ್ದನು. ಹಾಗಾಗಿಯೇ ಇವನು ವಂಚಕರ ಜಾಲವನ್ನು ಬಹಳ ಸೂಕ್ಷ್ಮವಾಗಿ ಭೇಧಿಸಿದನು. ಜೊತೆಗೆ ಆ ಕೆಲಸದಲ್ಲಿ ತೊಡಗಿದ್ದವನು ತಾನಲ್ಲ ಎನ್ನುವ ವಾಸ್ತವ ಜನರಿಗೆ ತಿಳಿದರೆ ಅವರಿಗೆ ತನ್ನ ಬಗೆಗಿನ ನಂಬಿಕೆಗಳು ಕುಸಿಯುವುದೆಂದು ಯಾರಿಗೂ ತಿಳಿಯದಂತೆ ವಂಚಕರನ್ನು ಬಂದಿಸಿತರುವಂತೆ ಆಜ್ಞಾಪಿಸುತ್ತಾನೆ ಮತ್ತು ಜನರ ಇಂಥ ವಂಚನೆಗೆ ಬಹಳ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾನೆ.

> "ಈ ಜನಗಳಿಗೆ ಮೋಸ ಮಾಡಲಿಕ್ಕೂ ಒಂದು ಮಿತಿ
> ಬೇಡವರ ? ಖೋಟಾ ನಾಣ್ಯ ಮಾಡುವುದನ್ನು ಕೇಳಿದ್ದೆ.
> ಖೋಟಾ ಕಾಗದ ಪತ್ರಗಳನ್ನು ಸಿದ್ಧ ಮಾಡಬಲ್ಲರು ಎಂದು
> ಕೇಳಿದ್ದೆ. ಆದರೆ ನನ್ನನೇ ನಕಲು ಮಾಡುವುದೆಂದರೆ
> ತೀರಾ ಅತಿರೇಕವಾಯಿತು."[೬]

ಆಧುನಿಕ ಯುಗ ಬದಲಾವಣೆಯ ಯುಗ. ಇಲ್ಲಿ ಎಲ್ಲವೂ ಸಾಧ್ಯ. ಪ್ರತಿಯೊಂದನ್ನು ಕೂಡ ನಕಲು ಮಾಡುವ ಸಾಧ್ಯತೆಗಳು ಇವೆ ಎಂಬುದನ್ನು ಗುರುತಿಸಬಹುದಾಗಿದೆ. ಜನರಲ್ ಮೋಪಟ್‌ನ ಆಜ್ಞೆಯನ್ನು ಹೊತ್ತು ವಂಚಕರನ್ನರಸುತ್ತ ಹೊರಟ ಕರ್ನಲ್ ಗೋರಾಂಗ್ ಚೀಟ್, ಗುರು, ರಾಜ ಮತ್ತು ತದ್ರೂಪಿ ನಾಲ್ವರನ್ನು ಬಂಧಿಸುವಲ್ಲಿ ಯಶಸ್ವಿಯಾಗುತ್ತಾನೆ. ಆದರೆ ಬುದ್ಧಿವಂತನಾದ ಚೀಟ್ ಕರ್ನಲ್‌ನಿಗೆ

ಹಣದ ಆಮಿಷ ಒಡ್ಡಿ ಅಲ್ಲಿಂದ ತಪ್ಪಿಸಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾನೆ. ಇದು ಸರ್ವಾಧಿಕಾರಿ ಪ್ರಭುತ್ವಕ್ಕೆ ಮತ್ತೊಂದು ಸವಾಲೂ ಆಗಿದ್ದಿತು. ಕರ್ನಲ್ ಗೋರಾಂಗ್ ಹಣದ ಆಸೆಯಿಂದ ವಂಚಕರನ್ನು ಬಿಟ್ಟುಬಿಡುವುದು ಸಹ ಸರ್ವಾಧಿಕಾರಕ್ಕೆ ವಿರುದ್ಧವಾಗಿ ರೂಪಿಸುತ್ತಿದ್ದ ಒಳಸಂಚು ಎಂದು ಹೇಳಬಹುದಾಗಿದೆ. ಆದರೆ ಅವನಲ್ಲಿದ್ದ ಸರ್ವಾಧಿಕಾರಿಯ ಭೌದ್ಧಿಕ ನಿಯಂತ್ರಣ ತದ್ರೂಪಿಯನ್ನು ಬಂಧಿಸುವಂತೆಯೂ ಮಾಡಿದ್ದಿತು.

ಬಂಧನಕೊಳಗಾದ ತದ್ರೂಪಿಯನ್ನು ಕಂಡು ಜನರಲ್ ಪೋಪಟ್‌ನಿಗೆ ಮೊದಲಿಗಿಂತ ಮತ್ತಷ್ಟು ಆಶ್ಚರ್ಯ ಉಂಟಾಗುತ್ತದೆ. ಆದರೆ ಅವನಲ್ಲಿದ್ದ ಭಯ, ಆತಂಕ, ಹೆದರಿಕೆ, ಹೇಡಿತನಗಳನ್ನು ಕಂಡು ಸಿಟ್ಟಾಗುತ್ತಾನೆ. ಆದರೆ ಹೀಗೆ ಸರ್ವಾಧಿಕಾರಿ ಜನರಲ್ ಪೋಪಟ್‌ನ ಪ್ರತಿಬಿಂಬದಂತೆ ಸೃಷ್ಟಿಸಿದ ತದ್ರೂಪಿಯಲ್ಲಿ ಅವನಿಗಿಂತ ಭಿನ್ನವಾದ ಗುಣಗಳನ್ನ ರೂಪಿಸುವುದು ವ್ಯವಸ್ಥೆಯನ್ನು ದುರ್ಬಲಗೊಳಿಸುವ ಹುನ್ನಾರವೇ ಆಗಿದೆ. ಇದನ್ನೇ ಡಿ.ಆರ್.ನಾಗರಾಜ್ ಅವರು ವಸಾಹತುಶಾಹಿ ಪ್ರಭುತ್ವವನ್ನು ದುರ್ಬಲಗೊಳಿಸಲು ದೇಶೀಯನು ಒಡ್ಡ ಬಹುದಾಗಿದ್ದ ಪ್ರತಿರೋಧವನ್ನು ವಿವರಿಸುತ್ತ 'ಮಿಮಿಕ್ರಿ' ಎಂದು ವ್ಯಾಖ್ಯಾನಿಸುತ್ತಾರೆ. 'ಮಿಮಿಕ್ರಿ' ಎಂಬುದು ಅನುಕರಣ ಮತ್ತು ಅಣಕ ಎಂಬ ಎರಡು ರೀತಿಯ ಪರಿಕಲ್ಪನೆಗಳನ್ನು ವಿವರಿಸುತ್ತಾರೆ.[2]

"ಅನುಕರಣೆ ಎಂಬುದು ಮೂಲಕ್ಕೆ ಹತ್ತಿರವಿರುವ ಒಂದು ಪ್ರಕ್ರಿಯೆ. ಇದರಲ್ಲಿ ಹೆಚ್ಚು ಪ್ರತಿರೋದಾತ್ಮಕತೆ, ಸಂಘರ್ಷದ ಸ್ವರೂಪಗಳಿಲ್ಲ. ಆದರೆ ಅಣಕ ಎಂಬುದು ಮೂಲಕ್ಕೆ ಬಹಳ ಪ್ರತಿಸ್ಪಂದನಾತ್ಮಕವಾದದ್ದು ಮತ್ತು ಅದು ಹೆಚ್ಚು ಶಕ್ತಿಯುತವಾಗಿ ವಿದ್ರೋಹಿ ಕೃತ್ಯವಾಗಿ ಕಾಣುತ್ತದೆ." ಎಂದು ಡಿ.ಆರ್.ನಾಗರಾಜ್ ವಿವರಿಸುತ್ತಾರೆ. ಅಂದರೆ ಒಂದು ಪ್ರಬಲ ಶಕ್ತಿಯನ್ನು ಮಣಿಸಲು ಅನುಕರಣೆಗಿಂತ ಅಣಕ ಹೆಚ್ಚು ಪ್ರಚೋದನಾತ್ಮಕವಾದದ್ದು. ಇದರಿಂದ ಹೆಚ್ಚು ಕ್ರಿಯಾಶೀಲವಾದ ಬದಲಾವಣೆಗಳು ಉಂಟಾಗುತ್ತವೆ ಎಂದು ಅರ್ಥೈಸಿಕೊಳ್ಳಬಹುದಾಗಿದೆ.

'ತದ್ರೂಪಿ' ನಾಟಕದಲ್ಲಿ ಸರ್ವಾಧಿಕಾರಿ ಜನರಲ್ ಪೋಪಟ್‌ನನ್ನು ಅಣಕಿಸಲೆಂದೇ ಅವನಿಗಿಂತ ವ್ಯಕ್ತಿತ್ವದಲ್ಲಿ ಸಂಪೂರ್ಣ ಭಿನ್ನವಾದ ತದ್ರೂಪಿಯನ್ನು ರೂಪಿಸಿರುವಂತಹದ್ದು. ಸರ್ವಾಧಿಕಾರಿಯಲ್ಲಿ ಇರಬೇಕಾದ ಧೈರ್ಯ, ಸ್ಥೈರ್ಯ, ದರ್ಪ, ಘನತೆ, ಗಾಂಭಿರ್ಯಗಳಂಥ ಉದಾತ್ತ ಭಾವನೆಗಳಿಗೆ ಬದಲಾಗಿ ಅಂಜಿಕೆ, ಹೇಡಿತನ, ಉದಾಸಿನ ಭಾವನೆಗಳು ಅಣಕದ ಪ್ರತೀಕಗಳಂತೆ ಕಂಡುಬರುತ್ತವೆ. ಇದು ಸರ್ವಾಧಿಕಾರಿ ಪ್ರಭುತ್ವಕ್ಕೆ ಒಡ್ಡಿದ ಬಹಳ ದೊಡ್ಡ ಪ್ರತಿರೋಧ. ಆದರೆ ಇಂಥ ಪ್ರತಿರೋಧವನ್ನೂ ಜನರಲ್ ಪೋಪಟ್ ಸಮರ್ಥವಾಗಿ ನಿಗ್ರಹಿಸುತ್ತಾನೆ.

ಅಮಾಯಕನೂ ಅಂಜುಬುರುಕನೂ ಆದ ತದ್ರೂಪಿಗೆ ಶಿಕ್ಷೆಯ ರೂಪದಲ್ಲಿ ಸರ್ವಾಧಿಕಾರಿ ಪಾತ್ರವನ್ನು ವಹಿಸಿಕೊಳ್ಳುವಂತೆ ಒಪ್ಪಿಸುತ್ತಾನೆ. ಆ ಮೂಲಕ ತನ್ನ ದೇಶದ ಎಲ್ಲಾ ವಿದ್ರೋಹಿಗಳನ್ನು ಹತ್ತಿಕಲು ಹೊಸ ಸಂಚಿಕೆಯೊಂದನ್ನು ರೂಪಿಸಿದನು.

"ನಾಳೆ ನಾನು ವಿದೇಶಕ್ಕೆ ಹೋಗಬೇಕಿತ್ತು.
ವಿಮಾನ ಸಿದ್ಧವಾಗಿ ನಿಂತಿದೆ. ಆದರೆ ನಾನು
ಹೋಗಲ್ಲ. ನನ್ನ ಬದಲಿಗೆ ನೀನು ಹೋಗು."[೮]

ಹೀಗೆ ಸರ್ವಾಧಿಕಾರಿ ತಾನು ಹೋಗಬೇಕಾದ ಸ್ಥಳಗಳಿಗೆಲ್ಲಾ ತದ್ರೂಪಿಯನ್ನು ಕಳುಹಿಸತೊಡಗಿದನು. ಆ ಮೂಲಕ ತನ್ನ ಪ್ರಾಣವನ್ನು ಉಳಿಸಿಕೊಳ್ಳುವುದು ಮಾತ್ರವಲ್ಲದೆ ವಿದ್ರೋಹಿಗಳನ್ನು ಅವರಲ್ಲೇ ಒಬ್ಬನಾಗಿ ಬಂಧಿಸತೊಡಗಿದನು. ಹೀಗೆ ಎಲ್ಲಾ ವಿದ್ರೋಹಿಗಳನ್ನು ಹತ್ತಿಕಿದ ಮೇಲೂ ಹೊಸ ಹೊಸ ಹಂಚಿಕೆಗಳನ್ನು ರೂಪಿಸುತ್ತಲೇ ಮುಂದುವರೆದಿದ್ದ. ತದ್ರೂಪಿಯ ಮೇಲೆ ತಾನೆ ಕೊಲೆ ಪ್ರಯತ್ನ ನಡೆಸಿ ವಿದ್ರೋಹಿಗಳ ಕೃತ್ಯ ಎಂದು ಇನ್ನೂ ಹೆಚ್ಚಿನ ಜನಗಳನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಂಡನು. ಇದೂ ಸಹ ಅವನು ತನ್ನ ಜನಪ್ರಿಯತೆಯನ್ನು ಹೆಚ್ಚಿಸಿಕೊಳ್ಳಲು ನಡೆಸುತ್ತಿದ್ದ ಹುನ್ನಾರವೇ ಆಗಿರುತ್ತಿತ್ತು ಮತ್ತು ಜನಗಳಲ್ಲಿ ತನ್ನ ಬಗೆಗೆ ಇದ್ದ ಭಯ, ನಂಬಿಕೆ, ಪ್ರತಿತಿಗಳನ್ನು ಶಾಶ್ವತಗೊಳಿಸುವ ಕ್ರಮವೂ ಆಗಿದ್ದಿತು.

ಹೀಗೆ ಸರ್ವಾಧಿಕಾರಿ ಜನರಲ್ ಪೋಪಟ್ ತನ್ನ ಅಧಿಕಾರದ ಶಾಶ್ವತತೆಗಾಗಿ ನಿರಂಕುಶ ಪ್ರಭುತ್ವದ ಶಾಶ್ವತತೆಗಾಗಿ ರೂಪಿಸುತ್ತಿದ್ದ ಹೊಸ ಹಂಚಿಕೆಗಳು ಕೊನೆಗೆ ತದ್ರೂಪಿಯ ಪ್ರಾಣವನ್ನು ಬಲಿತೆಗೆದುಕೊಳ್ಳುತ್ತದೆ. ಜನರಲ್ ಪೋಪಟ್ ತನ್ನ ಸ್ವಾರ್ಥ ಸಾಧನೆಗಾಗಿ ಅಮಾಯಕನನ್ನು ಬಲಿತೆಗೆದುಕೊಂಡ. ಈ ರೀತಿಯ ಸ್ವಾರ್ಥ ರಾಜಕಾರಣ ಸಮಕಾಲೀನ ರಾಜಕೀಯ ವ್ಯವಸ್ಥೆಯಲ್ಲಿ ಕೂಡ ಹಲವಾರು ಅಮಾಯಕರನ್ನು ಬಲಿ ತೆಗೆದುಕೊಂಡ ಪ್ರಸಂಗಗಳು ನಡೆಯುತ್ತಲೇ ಇವೆ. ಅಸೆಂಬ್ಲಿ ಮೀಟಿಂಗ್‌ಗೆಂದು ಬಂದಿದ್ದ ಮಿಲಿಟರಿ ಗವರ್ನರ್‌ಗಳು ತದ್ರೂಪಿಯನ್ನೇ ಸರ್ವಾಧಿಕಾರಿ ಜನರಲ್ ಪೋಪಟ್ ಎಂದು ತಿಳಿದು ಇರಿದು ಕೊಲೆ ಮಾಡುತ್ತಾರೆ. ತಮ್ಮನ್ನಾವರಿಸಿದ್ದ ಸರ್ವಾಧಿಕಾರಿ ಪ್ರಭುತ್ವವನ್ನು ನಾಶಮಾಡಿ ಸ್ವತಂತ್ರರಾದೆವು ಎಂದು ಸಂಭ್ರಮಿಸುತ್ತಾರೆ. ಆದರೆ ಸರ್ವಾಧಿಕಾರಿ ಜನರಲ್ ಪೋಪಟ್ ಅಲ್ಲೇ ಹಿಂದೆ ಇದ್ದ ತನ್ನ ತೈಲ ಚಿತ್ರವನ್ನು ಸೀಳಿಕೊಂಡು ಹೊರಬಂದು ಎಲ್ಲರನ್ನು ಬಹಳ ನಾಟಕೀಯವಾಗಿ ಬಂಧಿಸುತ್ತಾನೆ. ಇದು ಸರ್ವಾಧಿಕಾರತ್ವದ ರಾಜಕೀಯ ತಂತ್ರವೂ ಹೌದು ಜೊತೆಗೆ ಅದರ ಮುಂದುವರಿಕೆಯೂ ಹೌದು. ಅಂದರೆ ಈ ಸರ್ವಾಧಿಕಾರಿ ಪ್ರಭುತ್ವ ಎಂಬುದು ರಕ್ತಬೀಜಾಸುರ ಇದ್ದ ಹಾಗೆ.

ನಾವು ಎಷ್ಟು ನಾಶಮಾಡುತ್ತಾ ಹೋಗುತ್ತೇವೋ ಅಷ್ಟೇ ವೇಗವಾಗಿ ಅದರ ಕುಡಿಗಳು ಮರುಸೃಷ್ಟಿ ಹೊಂದುತ್ತಲೆ ಇರುತ್ತವೆ. ಇಂದು ನಮ್ಮ ದೇಶದಲ್ಲಿ ಸರ್ವಾಧಿಕಾರಿ ಪ್ರಭುತ್ವ ಇಲ್ಲದಿರಬಹುದು, ಆದರೆ ಅದರ ಧೋರಣೆಗಳು ಮಾತ್ರ ಜೀವಂತವಾಗಿವೆ.

ಇಂಥ ರಾಕ್ಷಸ ಪ್ರವೃತ್ತಿಯ ಸರ್ವಾಧಿಕಾರಿ ಪ್ರಭುವಾದ ಜನರಲ್ ಪೋಪಟ್‌ನಿಗೂ ಒಂದು ಮನಸ್ಸಿದೆ. ಅವನಲ್ಲಿಯೂ ಸಂವೇದನಾಶೀಲತೆ ಇದೆ ಎಂಬುದನ್ನು ನಾಟಕದಲ್ಲಿ ಅವನ ಸ್ವಗತ ಮತ್ತು ಹಲವು ಬಿಡಿ ಭಾಗಗಳಲ್ಲಿ ಗುರುತಿಸಬಹುದಾಗಿದೆ. ಬರಗೂರು ರಾಮಚಂದ್ರಪ್ಪ ಅವರು ತಮ್ಮ "ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ" ಎಂಬ ಗ್ರಂಥದಲ್ಲಿ ಸರ್ವಾಧಿಕಾರಿ ಮನೋವ್ಯಾಪಾರವನ್ನ ಕುರಿತು ಹೀಗೆ ಹೇಳಿದ್ದಾರೆ : "ಸರ್ವಾಧಿಕಾರಿ ಪ್ರಭುತ್ವ ಜನಸಮುದಾಯದೊಂದಿಗೆ ನೇರ ಸಂವಾದವನ್ನು ಬೆಳಸದೆ ದರ್ಪದ ಮೂಲಕ ಜನರ ಬದುಕನ್ನು ನಿಯಂತ್ರಿಸುತ್ತಿರುತ್ತದೆ. ಸರ್ವಾಧಿಕಾರೀ ವ್ಯವಸ್ಥೆಯಲ್ಲಿ ಪರಮ ಅಧಿಕಾರ ಮತ್ತು ಪರಮ ವಿಧೇಯತೆಗಳೆಂಬ ಎರಡು ನೆಲೆಗಳು ಅಸ್ತಿತ್ವದಲ್ಲಿರುವುದರಿಂದ ಸರ್ವಾಧಿಕಾರಿಯಾದವನು ಹೊರಜಗತ್ತಿನಿಂದ ದೂರವಿದ್ದು ಒಂಟಿ ಜೀವಿಯಾಗಿರುತ್ತಾನೆ. ಒಂಟಿಯಾಗಿದ್ದರೂ ಒಂಟಿತನವನ್ನು ಅನುಭವಿಸಲಾಗದ ಅಧಿಕಾರ ಮದದಿಂದ ಹಾಗೂ ಭ್ರಮೆಯಲ್ಲಿ ಸಂವೇದನಾಶೀಲತೆ ಕಳೆದುಕೊಂಡಿರುತ್ತಾನೆ. ಇಂಥ ಮನೋಧರ್ಮದಿಂದ ಆತನ ಮನಸ್ಸು ಭ್ರಮೆ ಮತ್ತು ಕನಸುಗಳ ಗೂಡಾಗಿರುತ್ತದೆ. ಸರ್ವಾಧಿಕಾರಿಗೆ ಜನರ ನೇರ ಸಂಪರ್ಕ ಸಂವಾದಗಳು ಇಲ್ಲದ ಕಾರಣ ಕಂಡವರ ಕಣ್ಣು ಕಿವಿಗಳೇ ಇವನ ಕಣ್ಣು ಕಿವಿಗಳಾಗಿರುತ್ತವೆ. ಅಂದರೆ ತನ್ನ ಆಪ್ತೇಷ್ಟರು, ಭಟ್ಟಂಗಿಗಳು ಹೇಳಿದ್ದನ್ನ ಕೇಳಿ ನಂಬುತ್ತಾನೆ. ಆ ಕಾರಣದಿಂದ ಈತನ ಪಂಚೇಂದ್ರಿಯಗಳು ಪ್ರಾಮಾಣಿಕತೆ ಹಾಗೂ ಅಧಿಕೃತತೆಗಳನ್ನ ಕಳೆದುಕೊಂಡಿರುತ್ತಾನೆ. ಹೀಗಾಗಿ ಅನ್ಯರು ಕಟ್ಟಿಕೊಡುವ ದೃಶ್ಯ ಹೇಳುವ ಮಾತು ಕೇಳಿಸಿದ ದನಿ, ಸಿದ್ಧ ಮಾಡಿಟ್ಟ ಸುವಾಸನೆ ಎಲ್ಲವೂ ಇವನದಾಗುತ್ತದೆ." ಎಂದು ಸರ್ವಾಧಿಕಾರಿಯ ನಿಜವಾದ ದೌರ್ಬಲ್ಯಗಳು ಏನು ಎಂದು ತಿಳಿಸಿಕೊಡುತ್ತಾರೆ.

ಸರ್ವಾಧಿಕಾರಿಯಾದವನು ಜನಸಮುದಾಯದಿಂದ ಸಂಪೂರ್ಣವಾಗಿ ದೂರ ಇರುವುದರಿಂದ ಅವರ ಭಾವನೆಗಳು, ನೋವು-ನಲಿವುಗಳು, ಕುಂದು-ಕೊರತೆಗಳನ್ನು ನೇರವಾಗಿ ತಿಳಿದುಕೊಳ್ಳಲಾರ. ಬರಗೂರು ಅವರು ಹೇಳಿದಂತೆ ಇತರರ ಕಣ್ಣು-ಕಿವಿಗಳೇ ಅವನ ಕಣ್ಣು ಕಿವಿಗಳಾಗಿರುತ್ತವೆ. ಸರ್ವಾಧಿಕಾರಿ ಜನರಲ್ ಪೋಪಟ್‌ನದ್ದೂ ಇದೇ ಪರಿಸ್ಥಿತಿ. ಅವನಿಗೂ ಮತ್ತು ಜನಸಮುದಾಯಕ್ಕೂ ನೇರ ಸಂಪರ್ಕವೇ ಇಲ್ಲ. ತನ್ನ ಇತರ ಅಧಿಕಾರಿಗಳ ಮೂಲಕ ದೇಶದ ಜನರ ಆಗು-ಹೋಗುಗಳನ್ನು ತಿಳಿದುಕೊಳ್ಳುತ್ತಾನೆ. ದೇಶದ ಎಲ್ಲಾ ಜನಸಮುದಾಯದಿಂದ ದೂರವಾಗಿ ಕಡೆಗೆ ತನ್ನ ಹೆಂಡತಿ ಮಕ್ಕಳಿಂದಲೂ ದೂರವಾಗಿ ಏಳು ಸುತ್ತಿನ

ಕೋಟೆಯ ಏಳನೇ ಮಹಡಿಯಲ್ಲಿ ಒಂಟಿಯಾಗಿ ಜೀವಿಸುತ್ತಿದ್ದಾನೆ. ಆದರೆ ಇದಕ್ಕಾಗಿ ಬಹಳವಾಗಿ ಮರುಗುತ್ತಾನೆ. ಜೊತೆಗೆ ಈ ಒಂಟಿತನವನ್ನು ದೂರಗೊಳಿಸಲು ವಾಸ್ತವದಲ್ಲಿ ಇಲ್ಲದ ತಾಯಿಯ ಜೊತೆ ಸಂಭಾಷಣೆ ನಡೆಸುತ್ತಾನೆ. ಇಲ್ಲಿಯ ಇವನ ಸಂಭಾಷಣೆ(ಸ್ವಗತ) ಬಹಳ ವಿಚಿತ್ರವಾದದ್ದು ಮತ್ತು ವಿಕಾರವಾದದ್ದು. ಈ ಭಾಗದಲ್ಲಿ ಅವನಲ್ಲಿದ್ದ ಧೈರ್ಯ, ಸ್ಥೈರ್ಯ, ಭಕ್ತಿ, ನಂಬಿಕೆ ಎಲ್ಲದಕ್ಕೆ ಬದಲಾಗಿ ಹೆದರಿಕೆ, ಹೇಡಿತನ, ಅಪನಂಬಿಕೆ ಹಾಗೂ ಧೈವಹೀನತೆ ತಾಂಡವವಾಡುತ್ತಿರುವುದನ್ನು ಗಮನಿಸಬಹುದು.

> "ಅದು ಒಂಥರಾ ಹೆದರಿಕೆ. ಆ ಹೆದರಿಕೆ ಮಲಗಿದ
> ಮೇಲೆ ಶುರುವಾಗುತ್ತೆ. ಅವು ನಾನು ಮಲಗೋದನ್ನೆ
> ಕಾಯ್ತಾ ಇರ್ತವೆ. ನಾನು ಇನ್ನ ನೆಲಕ್ಕೆ ಹಣೆ ಹಚ್ಚಲಿಕ್ಕಿಲ್ಲ,
> ಅದೆಲ್ಲಿಂದ ಬರ್ತಾವೋ."[೧೦]

ಹೀಗೆ ಜನರಲ್ ಪೋಪಟ್ ತನ್ನ ಜೀವನದಲ್ಲಿ ಇಲ್ಲದ ನೆಮ್ಮದಿಗಾಗಿ ಅರಸುತ್ತಿದ್ದನು. ಈ ಸಂದರ್ಭದಲ್ಲಿಯೇ ತದ್ರೂಪಿ ಅವನಿಗೆ ಬಹಳ ನೆರವಾಗುತ್ತಾನೆ. ಅವನ ಎಲ್ಲಾ ರಾಜಕೀಯ ಕಾರ್ಯಗಳನ್ನೂ ನಿರ್ವಹಿಸುವುದರ ಜೊತೆ ಅವನ ಒಂಟಿತನವನ್ನೂ ನಿವಾರಿಸಲು ನೆರವಾಗುತ್ತಿದ್ದ. ಇದನ್ನ ಜನರಲ್ ಪೋಪಟ್‌ನ ಮಾತುಗಳಲ್ಲೇ ಗುರುತಿಸುವ್ಯದಾದರೆ :

> "ನೀನು ಹೋದ ಮೇಲೆ ತದ್ರೂಪಿನೆ ನನಗೆ ಒಂಥರಾ ಜೊತೆ
> ಅನ್ನಬಹುದು. ಇಬ್ಬರೂ ಒಂದೇ ತಟ್ಟೇಲಿ ಊಟ ಮಾಡ್ತೀವಿ
> ಮಧ್ಯಾಹ್ನದ ಹೊತ್ತು ಒಟ್ಟಿಗೆ ಕೂತು ಇಸ್ಪೀಟ್ ಆಡ್ತೀವಿ."[೧೧]

ಎಂದು ಜನರಲ್ ಪೋಪಟ್ ತನ್ನ ತಾಯಿಯ ತೈಲ ಚಿತ್ರದ ಮುಂದೆ ನಿಂತು ಕೊರಗುತ್ತಾನೆ. ತದ್ರೂಪಿಯ ಜೊತೆಗಿನ ತನ್ನ ಸಂಬಂಧಕ್ಕೆ ಬಹಳ ಖುಷಿ ಪಡುತ್ತಾನೆ. ಆದರೆ ತನ್ನ ಸರ್ವಾಧಿಕಾರಿ ಪ್ರಭುತ್ವ ಶಾಶ್ವತಗೊಳಿಸಿಕೊಳ್ಳಲು ಪ್ರಜ್ಞಾಪೂರ್ವಕವಾಗಿಯೇ ಅವನನ್ನು ಬಲಿ ಕೊಡುತ್ತಾನೆ. ಇದಕ್ಕಾಗಿ ಬಹಳವಾಗಿ ವ್ಯಥೆ ಪಡುತ್ತಾನೆ.

> "ನಾನು ನಿನ್ನಂಥವನನ್ನು ಉಳಿಸಿಕೊಳ್ಳೋದಕ್ಕೆ ಆಗ್ತಿಲ್ಲವಲ್ಲಯ್ಯ
> ನನಗೆ! ನೀನು ಸತ್ತು ಹೋದರೆ ನಾನೇನು ಮಾಡಲಿ"[೧೨]

ಎಂದು ತಾನು ಹೂಡಿದ ಹುನ್ನಾರಗಳಿಗೆ ತದ್ರೂಪಿ ಬಲಿಯಾಗುತ್ತಾನೆಂದು ಬಹಳವಾಗಿ ಕೊರಗುತ್ತಾನೆ. ಜೊತೆಗೆ ತಾನು ಮತ್ತೆ ಒಂಟಿಯಾಗುವೆನೆಂದು ಹೆದರಿಕೆಯೂ ಅವನಲ್ಲಿದೆ. ಹಾಗಾಗಿಯೇ ಈ ಒಂಟಿತನ, ಹೆದರಿಕೆ, ಹೇಡಿತನಗಳಿಂದ ಹೇಗಾದರೂ ಮುಕ್ತನಾಗಲೇಬೇಕೆಂದು ತದ್ರೂಪಿಯ ಸಾವನ್ನೇ ತನ್ನ ಸಾವನ್ನಾಗಿ ಪರಿವರ್ತಿಸಲು ನಿರ್ಧರಿಸುತ್ತಾನೆ. ನೆರೆದ ಲಕ್ಷಾಂತರ ಜನರ ಎದುರು ತದ್ರೂಪಿಯನ್ನೇ ಸರ್ವಾಧಿಕಾರಿ ಜನರಲ್ ಪೋಪಟ್ ಎಂದು ನಂಬಿಸಲೆತ್ನಿಸುತ್ತಾನೆ. ಇದು ಅವನ ರಾಜಕೀಯ ಹುನ್ನಾರವೂ ಆಗಿದ್ದಿತು ಎಂಬುದನ್ನು ನಾವು ಮರೆಯಬಾರದು. ಆದರೆ ಅವನ ಅಂತರಂಗದಲ್ಲಿಯೂ ನಿಜವಾದ ಮಾನವತ್ವದ ಮನಸ್ಸು ನೆಲೆಸಿದೆ ಎಂಬುದನ್ನು ನಾಟಕದ ಕೊನೆಯ ಭಾಗದಲ್ಲಿ ನಮಗೆ ಸ್ಪಷ್ಟವಾಗುತ್ತದೆ.

ಹಾಗಾದರೆ ನಿಜವಾದ ಖಳನಾಯಕ ಯಾರು? ಎಂಬ ಪ್ರಶ್ನೆ ನಮಗೆ ಎದುರಾಗುತ್ತದೆ. ಹೇಮಾ ಪಟ್ಟಣಶೆಟ್ಟಿಯವರು 'ತದ್ರೂಪಿ' ನಾಟಕದ ಮುನ್ನುಡಿಯಲ್ಲಿ "ನಿಜವಾದ ಖಳನಾಯಕ ಮನುಷ್ಯನೇ ಅಲ್ಲ, ವಾಸ್ತವದಲ್ಲಿ ಕೇಂದ್ರೀಕೃತ ವ್ಯವಸ್ಥೆಯೇ ನಿಜವಾದ ಖಳನಾಯಕ."[೧೩] ಎಂದು ತಿಳಿಸುತ್ತಾರೆ. ಅಂದರೆ ಒಬ್ಬ ಸರ್ವಾಧಿಕಾರಿ ದುಷ್ಟನಲ್ಲ, ಬದಲಿಗೆ ಅವನನ್ನು ಆವರಿಸಿಕೊಂಡ ಸರ್ವಾಧಿಕಾರಿ ಪ್ರಭುತ್ವವೇ ನಿಜವಾದ ಖಳನಾಯಕ ಎಂದು ಅರ್ಥೈಸಿಕೊಳ್ಳಬಹುದಾಗಿದೆ.

"ನಾನು ಜನರಲ್ ಅಲ್ಲ, ನಾನು ತದ್ರೂಪಿ"
"ನಾನು ದಿನಕ್ಕೆ ಹತ್ತು ಸಲ ಹೀಗೆ ನನ್ನನ್ನು ನಾನೇ
ಜ್ಞಾಪಿಸಿಕೋತಾ ಇರ್ತೀನಿ. ಇಲ್ಲದಿದ್ದರೆ ಮರೆತು ಬಿಡಬಹುದು
ಅಂತ ದಿಗಿಲು.................ಮೊನ್ನೆ ಹಾಗೇ ಮರೆತು ಬಿಟ್ಟಿದ್ದರಿಂದ
ಒಂದು ಸಣ್ಣ ಅನಾಹುತ ಆಗಿ ಹೋಯಿತು.
ಒಬ್ಬನಿಗೆ ವಿನಾಕಾರಣ ಮರಣದಂಡನೆ ವಿಧಿಸಿಬಿಟ್ಟ
ಅವನು ಪಾಪ! ಏನೂ ಮಾಡಿರಲಿಲ್ಲ. ನನ್ನ ಕಾಲಿಗೆ
ಬೀಳೋದಕ್ಕೆ ಬಂದವನು ಗಾಬರಿಯಾಗಿ ಕಾಲು ಜಾರಿ
ನನ್ನ ಮೇಲೆ ಬಿದ್ದು ಬಿಟ್ಟಿದ್ದ ಅಷ್ಟೆ"[೧೪]

ಎಂದು ತದ್ರೂಪಿ ನುಡಿಯುವ ಮಾತುಗಳು ಬಹಳ ಗಮನಾರ್ಹವಾದವುಗಳು. ಸರ್ವಾಧಿಕಾರಿಯ ಪಾತ್ರವನ್ನು ವಹಿಸಿದ್ದ ಸಾಮಾನ್ಯ ಕ್ಷೌರಿಕನಾದ ತದ್ರೂಪಿಯಲ್ಲಿಯೂ ಸರ್ವಾಧಿಕಾರಿ ಪ್ರಭುತ್ವದ ಅಧಿಕಾರ, ದರ್ಪ, ಗಾಂಭೀರ್ಯಗಳು ನೆಲೆಸಿ ಅವನ ವಿವೇಚನೆಯನ್ನೇ ಹಾಳುಮಾಡುವ ಸಂಗತಿಯನ್ನು ಗುರುತಿಸಬಹುದಾಗಿದೆ.

ಒಟ್ಟಿನಲ್ಲಿ ಒಬ್ಬ ಸಾಮಾನ್ಯ ಮನುಷ್ಯ ಸರ್ವಾಧಿಕಾರಿಯೊಬ್ಬನನ್ನ ಅನುಕರಣೆ ಮಾಡಲು ಹೋಗಿ ಮತ್ತೊಬ್ಬ ಸರ್ವಾಧಿಕಾರಿ ಜನಸಾಮಾನ್ಯರು ಸರ್ವಾಧಿಕಾರಿ ಜನರಲ್ ಪೋಪಟ್‌ನ ತದ್ರೂಪಿಯಾಗಿ ರೂಪ ಪಡೆಯುವ ಈ ಕ್ರಿಯೆ ಸರ್ವಾಧಿಕಾರದ ವಿರುದ್ಧ ಜನಸಮುದಾಯವು ತೋರಿದ ವಿದ್ರೋಹದ ವಿರುದ್ಧ ನೆಲೆಯಾಗಿ ಗುರುತಿಸಬಹುದಾಗಿದೆ. ಸಂಚು, ವಿದ್ರೋಹ, ಕ್ರೌರ್ಯ, ಹಿಂಸೆ, ರಕ್ತಪಾತ, ಪಿತೂರಿ ಇವೆಲ್ಲಾ ಸರ್ವಾಧಿಕಾರಿ ಧೋರಣೆಯ ಬೇರೆ ಬೇರೆ ರೂಪಗಳಾಗಿ ನಾಟಕದಲ್ಲಿ ಕಾಣಿಸುತ್ತದೆ. ಎಲ್ಲಾ ಜಗತ್ತಿನಲ್ಲೂ ಎಲ್ಲಾ ಕಾಲದಲ್ಲೂ ಸರ್ವಾಧಿಕಾರಿ ಪ್ರಭುತ್ವ ಮತ್ತು ಅದರ ಧೋರಣೆಗಳು ನಿರಂತರವಾದದ್ದು ಎಂಬುದನ್ನು 'ತದ್ರೂಪಿ' ನಾಟಕ ಸೂಚಿಸುತ್ತದೆ.

**ಕೊನೆ ಟಿಪ್ಪಣಿ :**


೧. ತದ್ರೂಪಿ : ಪ್ರಸನ್ನ : ಪ್ರಸ್ತಾವನೆ : ಹೇಮಾ ಪಟ್ಟಣಶೆಟ್ಟಿ : ಪುಟ – ೨

೨. ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ, ೨೦೦೧ – ಪುಟ – ೭೬

೩. ಅದೇ ಪತ್ಯ – ಪುಟ – ೧೧೨, ೧೧೩

೪. ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು : ಡಾ.ಅಶೋಕ ಕುಮಾರ ರಂಜೇರೆ : ಸಿ.ವಿ.ಜಿ.ಪಬ್ಲಿಕೇಷನ್ಸ್, ೨೦೦೨

೫. ಅದೇ ಪತ್ಯ – ಪುಟ – ೭೪

೬. ಅದೇ ಪತ್ಯ – ಪುಟ – ೯೨

೭. ಸಾಹಿತ್ಯ ಕಥನ : ಡಿ.ಆರ್.ನಾಗರಾಜ್ : ಅಕ್ಷರ ಪ್ರಕಾಶನ : ೧೯೯೬, ಪುಟ – ೧೨

೮. ಅದೇ ಪತ್ಯ – ಪುಟ – ೧೧೧

೯. ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ : ಸರ್ವಾಧಿಕಾರದ ಮತ್ತು ಸಂವೇಧನಾಶೀಲತೆ : ಬರಗೂರು ರಾಮಚಂದ್ರಪ್ಪ : ಅಂಕಿತ ಪ್ರಕಾಶನ : ೨೦೦೧ : ೨೦೮, ೨೦೯

೧೦. ಅದೇ ಪತ್ಯ – ಪುಟ – ೧೦೮

೧೧. ಅದೇ ಪತ್ಯ – ಪುಟ – ೧೩೫

೧೨. ಅದೇ ಪತ್ಯ – ಪುಟ – ೧೩೫

೧೩. ತದ್ರೂಪಿ : ಪ್ರಸನ್ನ : ಪ್ರಸ್ತಾವನೆ : ಹೇಮಾ ಪಟ್ಟಣಶೆಟ್ಟಿ : ಪುಟ – ೩

೧೪. ಅದೇ ಪತ್ಯ – ಪುಟ – ೧೧೭

# ಅಧ್ಯಾಯ – ೩

## ವಸಾಹತುಶಾಹಿ ಧೋರಣೆ ಮತ್ತು ಸ್ಥಳೀಯತೆಯ ಪ್ರಶ್ನೆ

ಬ್ರಿಟೀಷರು ಪೌರ್ವಾತ್ಯ ದೇಶಗಳನ್ನು ಹೆಚ್ಚು ಬುದ್ಧಿವಂತಿಕೆಯಿಂದ ಮತ್ತು ಹಿಂಸಾತ್ಮಕವಾಗಿ ಇತರ ದೇಶಗಳಿಗಿಂತ ಬಹಳ ಶೀಘ್ರವಾಗಿ ವಶಕ್ಕೆ ತೆಗೆದುಕೊಂಡರು. ಆದಾಗ್ಯೂ, ೧೭೯೨ರ ಮತ್ತು ೧೮೦೩ರ ಅವಧಿ – ಅಂದರೆ, ಮೂರನೆ ಮೈಸೂರು–ಆಂಗ್ಲರ ಕದನದಿಂದ ಪ್ರಾರಂಭವಾಗಿ ತಿರುವಂಕೂರು, ಕೊಚ್ಚಿನ್ ಸೈನ್ಯಗಳ ಪರಾಭವದವರೆಗೆ ಬಹಳ ಹಿಂಸಾತ್ಮಕವಾಗಿದ್ದಿತು. ಅತ್ಯಂತ ಪ್ರಬಲವಾದ ಪ್ರತಿರೋಧವನ್ನು ಹೈದರಾಲಿಯ ಆಳ್ವಿಕೆಯಲ್ಲಿ, ನಂತರ ಟಿಪ್ಪು ಸುಲ್ತಾನ್ ಆಳ್ವಿಕೆಯಲ್ಲಿ ಮೈಸೂರು ವ್ಯಕ್ತಪಡಿಸಿತು. ೪೦ ವರ್ಷಗಳ ಕಾಲ ಹೈದರ್ ಮತ್ತು ಟಿಪ್ಪು ಹೋರಾಡಿದರಾದರೂ ಅಂತಿಮವಾಗಿ ಹಿಂಸಾತ್ಮಕವಾಗಿ ಬ್ರಿಟೀಷರು ಅವರನ್ನು ಶರಣಾಗಿಸಿದರು. ಅಷ್ಟಕ್ಕೆ ಮುಗಿಯಲಿಲ್ಲ; ಬ್ರಿಟೀಷರ ನಿಯಂತ್ರಣ ಅಲ್ಲಿಗೆ ಸಂಪೂರ್ಣವಾಯಿತೆಂದು ಅಲ್ಲ. ಆಗಾಗ ವ್ಯಾಪಕವಾದಂಥ ಬ್ರಿಟೀಷ–ವಿರೋಧಿ ಪ್ರತಿರೋಧಗಳು ಪ್ರಕಟವಾಗುತ್ತಲೇ ಇದ್ದವು. ೧೮೫೭ರಲ್ಲಿ ಭಾರತದಾದ್ಯಂತ ಬಹಳ ದೊಡ್ಡ ಪ್ರತಿರೋಧಗಳು ಪ್ರಕಟವಾದವು. ಆದರೆ ಬ್ರಿಟೀಷ ವಸಾಹತುಶಾಹಿ ಪ್ರಭುತ್ವ ಅದನ್ನು ಸಂಪೂರ್ಣವಾಗಿ ಹತ್ತಿಕ್ಕಿತು.[೧]

ಬ್ರಿಟೀಷ ವಸಾಹತುಶಾಹಿ ಪ್ರಭುತ್ವ ತನಗೆ ಎದುರಾದ ದಂಗೆಗಳನ್ನು ಬಗ್ಗು ಬಡಿದು ತಮ್ಮ ಅಧಿಕಾರವನ್ನು ಸ್ಥಾಪಿಸುವುದಕ್ಕೆ ಒಂದು ದಶಕದ ಕಾಲವೇ ಹಿಡಿಯಿತು. ವಸಾಹತುಶಾಹಿಗಳೊಡನೆ ಗುರುತಿಸಿಕೊಂಡಿದ್ದ ದೇಶೀಯ ರಾಜರು ಬ್ರೀಟೀಷರಿಗೆ ಜನರನ್ನೂ ಸಾಮಾನು–ಸರಂಜಾಮನ್ನು ಒದಗಿಸಿದ್ದ ಕಾರಣದಿಂದ ಮೇಲಿಂದ ಮೇಲೆ ಯುದ್ಧ ನಡೆಸಿದರೂ ಅವರಿಗೆ ಚೇತರಿಸಿಕೊಳ್ಳಲು ಸಾಧ್ಯವಾಗುತ್ತಿತ್ತು.

ಬ್ರಿಟೀಷರು ತಮ್ಮ ವಿರುದ್ಧ ಸಿಡಿದೆದ್ದವರಿಗೆ ಯಾವ ಬಗೆಯಾದ ಶಿಕ್ಷೆಯಾಗುತ್ತದೆ ಎಂಬುದಕ್ಕೆ ಮತ್ತು ತಮ್ಮೊಡನೆ ಸಹಕರಿಸಿದವರಿಗೆ ಏನೇನು ಅನುಕೂಲಗಳಾಗುತ್ತವೆಂಬುದನ್ನು ಬಹಿರಂಗವಾಗಿ ಪ್ರದರ್ಶಿಸುವುದನ್ನು ರೂಢಿಸಿಕೊಂಡಿದ್ದರು. ಹಾಗಾಗಿ ಸೆರೆ ಸಿಕ್ಕ ದಂಗೆಕೋರರಿಗೆ ಬಹಿರಂಗವಾಗಿ ಶಿಕ್ಷೆ ನೀಡುತ್ತಿತ್ತು; ಹಾಗೆಯೇ ಅವರೊಡನೆ ಸಹಕರಿಸಿದವರಿಗೆ ಪಾಳೆಗಾರಿಕೆ, ಜಮೀನ್ದಾರರ ಪಟ್ಟ ಮತ್ತು ಇತರ ಬಿರುದುಗಳನ್ನು ನೀಡುತ್ತಿತ್ತು. ಇದು ಅವರ ಅಧಿಕಾರದ ನಿರಂತರತೆಗೆ ಬಹಳ ಉಪಯೋಗಕರವಾಗಿ ಪರಿಣಮಿಸಿದ್ದರಿಂದ ದಂಗೆ ನಡೆದಾಗೆಲ್ಲಾ ಇದೇ ನೀತಿಯನ್ನು ಅನುಷ್ಠಾನಗೊಳಿಸಲಾಗುತ್ತಿತ್ತು. ಬ್ರಿಟೀಷರು

ಒಂದು ಬಾರಿ ಒಂದೇ ಚೆಂಡನ್ನು ಒದ್ದು ಎರಡು ಗೋಲುಗಳನ್ನು ಮಾಡುತ್ತಿದ್ದರು. ಹಾಗಾಗಿ, ನಮ್ಮ ದೇಶ ಇಡಿಯಾಗಿ ಭಯೋತ್ಪಾದನೆಗೆ ಒಳಗಾಯಿತು.[೨]

ಬ್ರಿಟೀಷರು ತಮ್ಮ ತಮ್ಮಲೇ ಕಾದಾಡುತ್ತಿದ್ದ ಸ್ಥಳೀಯ ರಾಜರನ್ನು ಪ್ರತ್ಯೇಕಿಸಿ ಅವರನ್ನು ಪರಾಭವಗೊಳಿಸುತ್ತಿದ್ದರು, ತಮ್ಮ ಸ್ವಿತ ಐಶಾರಾಮಿ ಜೀವನದಲ್ಲಿ ಮುಳುಗಿದ್ದ ಸ್ಥಳೀಯ ರಾಜರನ್ನು ಇನ್ನಷ್ಟು ಅದರಲ್ಲಿ ತಲ್ಲೀನರಾಗುವಂತೆ ಮಾಡಿ ಅವರನ್ನು ಸುಲಭವಾಗಿ ಅಧೀನಕ್ಕೊಳಪಡಿಸಿಕೊಳ್ಳುವ ಪ್ರಕ್ರಿಯೆ ನಡೆಸುತ್ತಿದ್ದರು. ಹೀಗೆ ಬ್ರಿಟೀಷರ ಬಲ ಮತ್ತು ಹುನ್ನಾರಗಳ ಎದುರು ತತ್ತರಿಸಿ ಹೋಗುತ್ತಿದ್ದ ಸ್ಥಳೀಯ ರಾಜರು ಅವರ ವಿರುದ್ಧ ಹೋರಾಡುವುದು ಕಠಿಣವೂ, ಅಪಾಯಕಾರಿಯೂ ಆದ ಸಂಗತಿಯೆಂದು ಮನಗಂಡರು. ಜೊತೆಗೆ ಅವರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳಲು ಮುಂದಾದರು. ಇದರಿಂದ ಪರಕೀಯ ಆಡಳಿತಕ್ಕೆ ಅನುಮೋದನೆ ದೊರಕಿದಂತಾಯಿತು.

ಪ್ರಸ್ತುತ ಅಧ್ಯಾಯದಲ್ಲಿ ಪ್ರಸನ್ನ ಅವರ 'ದಂಗೆಯ ಮುಂಚಿನ ದಿನಗಳು' ಎಂಬ ನಾಟಕದ ಹಿನ್ನೆಲೆಯಲ್ಲಿ ಈ ಬಗೆಯ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವದ ಆಕ್ರಮಣನೀತಿ, ಹುನ್ನಾರಗಳು ಎಂತಹವು ಎಂಬುದನ್ನು ಸಮಕಾಲೀನ ಕಾಲಘಟ್ಟದ ಹಿನ್ನೆಲೆಯಲ್ಲಿ ಚರ್ಚಿಸಿಕೊಳ್ಳಬಹುದಾಗಿದೆ. ಅದಕ್ಕೆ ೧೮೫೭ರಲ್ಲಿ ಅದಕ್ಕೆ ಒಡ್ಡಿದ ಪ್ರತಿರೋಧಗಳು ಎಂತಹವು ಮತ್ತು ಆ ಕಾಲಘಟ್ಟದ ರಾಜಕೀಯ, ಸಾಮಾಜಿಕ ಪರಿಸ್ಥಿತಿ ಹೇಗಿದ್ದಿತು ಎಂಬುದನ್ನು ಚರ್ಚಿಸಿಕೊಳ್ಳಬಹುದಾಗಿದೆ. ಭಾರತೀಯ ಸ್ವತಂತ್ರ ಚಳುವಳಿಯ ಸಂದರ್ಭದಲ್ಲಿ ಬ್ರಿಟೀಷ ವಸಾಹತುಶಾಹಿ ಅಧಿಕಾರ ಮತ್ತು ಅದರ ಮಿಲಿಟರಿ ಧೋರಣೆಗಳು, ಇವುಗಳ ವಿರುದ್ಧ ಸ್ಥಳೀಯರು ತೋರಿದ ಪ್ರತಿಭಟನೆ ಅಂದರೆ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ. ಈ ಚಾರಿತ್ರಿಕ ಘಟನೆಯ ಹಿನ್ನೆಲೆಯಲ್ಲಿ ಈ ನಾಟಕವನ್ನು ಪರಿಶೀಲಿಸಬಹುದಾಗಿದೆ.

'ದಂಗೆಯ ಮುಂಚಿನ ದಿನಗಳು' ನಾಟಕದ ಹೆಸರೇ ಸೂಚಿಸುವಂತೆ ೧೮೫೭ರ ಭಾರತ ಸ್ವಾತಂತ್ರ್ಯ ಸಂಗ್ರಾಮದ ದಂಗೆಯ ಮುಂಚಿನ ದಿನಗಳಲ್ಲಿ ಒಂದು ಪ್ರಮುಖ ಘಟ್ಟವನ್ನು ವಸ್ತುವಾಗಿಟ್ಟುಕೊಂಡು ರಚನೆಯಾದಂತಹದ್ದು. ಇಲ್ಲಿ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವದ ಆಕ್ರಮಣನೀತಿ, ಹುನ್ನಾರಗಳು, ಅಧಿಕಾರ ಸ್ಥಾಪನೆ, ಅವರ ಸಮಯ ಪ್ರಜ್ಞೆ ಮುಂತಾದವುಗಳನ್ನು ವಿವರಿಸುವ ಜೊತೆಗೆ ಸ್ಥಳೀಯ ಸಂಸ್ಥಾನಗಳ ರಾಜಕೀಯ ಶಿಥಿಲತೆಗಳನ್ನು ಚರ್ಚಿಸಿಕೊಳ್ಳಬಹುದಾಗಿದೆ. ಇದಕ್ಕೆ ಸ್ಥಳೀಯ ಅಸಹಾಯಕ ಜನಸಮುದಾಯದ ಪ್ರತಿಭಟನೆಯನ್ನು ಇಲ್ಲಿ ಸಮರ್ಥವಾಗಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಭಾರತದಲ್ಲಿ ಸುಲ್ತಾನರ ವಂಶವು ಅವನತಿಯ ಅಂಚಿಗೆ ತಲುಪಿತ್ತು. ರಾಜವಂಶದ ಕೊನೆಯ ಪೀಳಿಯವನಾದ ವಾಜಿದ್ ಅಲಿ ಖಾನ್ ವ್ಯವಸ್ಥೆಯ ಸಹಜ ದೌರ್ಬಲ್ಯಗಳಿಗೆ ತುತ್ತಾಗಿ ವಿನಾಶಕ್ಕೆ ದಾರಿಮಾಡಿಕೊಟ್ಟಿದ್ದ. ಇದು ಒಂದು ರೀತಿ ಎಲ್ಲಾ ರಾಜವಂಶಗಳ ಸಹಜ ಪ್ರವೃತ್ತಿಯಾಗಿತ್ತು ಎಂಬುದಕ್ಕೆ ಇತಿಹಾಸದಲ್ಲಿ ಅನೇಕ ಉದಾಹರಣೆಗಳು ದೊರೆಯುತ್ತವೆ.

"ರಾಜನ ಪ್ರಥಮ ಕರ್ತವ್ಯವೆಂದರೆ ಪ್ರಜೆಗಳ ಯೋಗಕ್ಷೇಮವನ್ನು ಕಾಪಾಡುವುದು. ಅವರ ಒಳಿತಿಗಾಗಿ ದುಡಿಯುವ ಮಹತ್ತರ ಜವಾಬ್ದಾರಿ ರಾಜನ ಮೇಲಿರುತ್ತದೆ."[3] ಕೌಟಿಲ್ಯ ತಿಳಿಸುತ್ತಾನೆ. ಪ್ರಜೆಗಳು ರಾಜನ ಆಶ್ರಯದಲ್ಲಿ ನೆಮ್ಮದಿಯನ್ನು ಕಾಣುತ್ತಾರೆ. ಹೀಗಾಗಿ ರಾಜನಾದವನು ತನ್ನ ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾದದ್ದು ಅವನ ಧರ್ಮ. ಆದರೆ ಬ್ರಿಟೀಷ ಆಳ್ವಿಕೆಯ ಸಂದರ್ಭದಲ್ಲಿ ಅವರು ತಂದೊಡ್ಡಿದ್ದ ಹಲವು ಬಗೆಯ ಐಶಾರಾಮಿ, ಸುಖ–ಭೋಗಗಳಿಗೆ ಸಂಪೂರ್ಣವಾಗಿ ಮನಸೋತ ರಾಜವಂಶಗಳು ಕ್ಷಣ ಕ್ಷಣಕ್ಕೂ ದುರ್ಬಲವಾಗುತ್ತಾ ತಮ್ಮ ಕರ್ತವ್ಯದಿಂದ ವಿಮುಖರಾಗುತ್ತಾ ಬಂದರು. ತಾವು ನಿರ್ವಹಿಸಬೇಕಾದ ಜವಾಬ್ದಾರಿಯುತ ರಾಜ ಕಾರ್ಯಗಳನ್ನು ಬಿಟ್ಟು ಸದಾಕಾಲ ತಮ್ಮ ಶಯ್ಯಾಗೃಹದಲ್ಲಿ ಮಧು, ಮಾನಿನಿಯರು, ನೃತ್ಯ, ಸಂಗೀತಗಳಂತಹ ಮನರಂಜನೆಯ ಕೈಂಕರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಇದು ಬ್ರಿಟೀಷ್ ಸಾಮ್ರಾಜ್ಯಶಾಹಿಯು ಸ್ಥಳೀಯ ರಾಜ ಸಂಸ್ಥಾನಗಳಿಂದ ಅಧಿಕಾರ ಕಸಿದುಕೊಂಡು ತಮ್ಮ ಅಧಿಕಾರ ಸ್ಥಾಪಿಸಿಕೊಳ್ಳಲು ಸುಲಭವಾಯಿತು.

ವಾಜಿದ್ ಅಲಿ ಖಾನನೂ ಸಹ ಒಬ್ಬ ರಾಜನಾಗಿ ತಾನು ನಿರ್ವಹಿಸಬೇಕಾದ ರಾಜತಾಂತ್ರಿಕ ಕರ್ತವ್ಯಗಳನ್ನು ಮರೆತು ಸಂಗೀತ, ನೃತ್ಯ, ಮಧು, ಮಾನಿನಿಯರೆಂಬ ಇವೇ ಮೊದಲಾದ ಲೌಕಿಕ ಸುಖ–ಭೋಗಗಳಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಾನೆ. ನೃತ್ಯ, ಸಂಗೀತಗಳಂಥ ಕಲೆಗಳು ರಾಜ್ಯದ ಸಾಂಸ್ಕೃತಿಕ ಮಹತ್ವವನ್ನು ಹೆಚ್ಚಿಸಲು ಕಾರಣವಾಗುವಂತಹವುಗಳು. ಇವು ರಾಜ್ಯ ರಾಜಕಾರಣದ ಏಕತಾನತೆಯಿಂದ ಬಿಡಿಸಿಕೊಳ್ಳಲು ಇರುವ ಉತ್ತಮ ಮಾರ್ಗಗಳು. ಆದರೆ ಇಂಥ ಬಿಡುಗಡೆಯ ಮಾರ್ಗಗಳು ನಿರಂತರವಾದರೆ ಬಂಧನವಾಗಿ ಪರಿಣಮಿಸುತ್ತದೆ. ಜೊತೆಗೆ ಅದರಲ್ಲಿ ಮುಳುಗಿದವರನ್ನೂ ಅಧಃಪತನದ ಅಂಚಿಗೆ ನೂಕುತ್ತದೆ. ವಾಜಿದ್ ಅಲಿ ಖಾನನೂ ಸಹ ಇಂಥ ಸಾಂಸ್ಕೃತಿಕ ಕಲೆಗಳಲ್ಲಿ ತೊಡಗಿಕೊಂಡು ರಾಜ್ಯ ರಾಜಕಾರಣದಿಂದ ದೂರವಾದ. ಇದು ಅವನ ಅಧಃಪತನಕ್ಕೆ ಕಾರಣವಾಯಿತು. ಹತ್ತೊಂಬತ್ತನೆಯ ಶತಮಾನದ ಬಹುಪಾಲು ರಾಜವಂಶಗಳ ಅಧಃಪತನಕ್ಕೆ ಇದೇ ಮೂಲಕಾರಣವಾಗಿದ್ದ

ಅನೇಕ ಉದಾಹರಣೆಗಳು ಚರಿತ್ರೆಯಲ್ಲಿ ದೊರೆಯುತ್ತವೆ. ಉದಾಹರಣೆಗೆ ಮೈಸೂರು ಸಂಸ್ಥಾನ, ಕೊಡಗು ಸಂಸ್ಥಾನ ಮುಂತಾದವುಗಳು.

ಹೀಗೆ ರಾಜ ಕಾರ್ಯವನ್ನು ಬಿಟ್ಟು ಗವಾಯಿಗಳ ಸಂಗೀತ ಸುಧೆಯಲ್ಲಿ ಮುಳುಗಿದ್ದ ವಾಜಿದ್ ಅಲಿ ಖಾನನನ್ನು ಬ್ರಿಟೀಷ ರೆಸಿಡೆಂಟ್ ಭೇಡಿಸುತ್ತಾನೆ. ಜೊತೆಗೆ ಅವನ ಇಂಥ ನಡತೆಯನ್ನು ಮುಂದಿಟ್ಟುಕೊಂಡೇ ರಾಜ್ಯ ರಾಜಕೀಯವನ್ನು ತನ್ನ ಕೈಗೆ ಹಸ್ತಾಂತರಿಸಿಕೊಳ್ಳುವ ಹಹುನ್ನಾರ ನಡೆಸುತ್ತಾನೆ :

> "ರಾಜಕಾರಣ ನಿಮ್ಮ ಹೆಗಲ ಮೇಲೆ ಹೊರಲಾರದ ಹೊರೆಯಾಗಿದೆ
> ಎಂದು ನಮಗೆ ಗೊತ್ತು. ನಿಮ್ಮ ವಿಲಾಸಗಳಿಗೆ ನಿಮಗಿನ್ನೂ ಹೆಚ್ಚಿನ
> ಸಮಯ ಸಿಗಲಿ ಎನ್ನುವ ಯೋಚನೆ ನಮ್ಮ ಗವರ್ನರ್ ಜನರಲ್ಲರಿಗೆ
> ಬಂದ ಹಾಗಿದೆ."[೪]

ಎಂದು ರಾಜ್ಯ ರಾಜಕಾರಣದಲ್ಲಿ ವಾಜಿದ್ ಅಲಿ ಖಾನ್ ತೋರುತ್ತಿದ್ದ ನಿರ್ಲಕ್ಷ್ಯೆಯ ಬಗೆಗೆ ಎಚ್ಚರಿಕೆಯ ಮಾತುಗಳನ್ನಾಡುತ್ತಲೇ ತನ್ನ ನಿರ್ಧಾರವನ್ನು ತಿಳಿಸುತ್ತಾನೆ. ರಾಜ್ಯದ ಕಾನೂನು ವ್ಯವಸ್ಥೆ, ಆಂತರಿಕ ವ್ಯವಸ್ಥೆ, ತೆರಿಗೆ ವಸೂಲಿ ವ್ಯವಸ್ಥೆ ಯಾವುದೂ ಸರಿಯಾಗಿಲ್ಲವೆಂದು ದೂರುತ್ತಾನೆ. ಹೀಗೆ ವಸಾಹತುಶಾಹಿ ಪ್ರಭುತ್ವ ಸ್ಥಳೀಯ ರಾಜ ಪ್ರಭುತ್ವದ ಲೋಪ-ಧೋಷಗಳನ್ನು ತಿಳಿಯುತ್ತಾ ಕಾಲಕ್ರಮೇಣ ಅಲ್ಲೆಲ್ಲಾ ತನ್ನ ಪ್ರಭುತ್ವವನ್ನು ಸ್ಥಾಪಿಸಿಕೊಂಡಿತು. ಅಲ್ಲದೆ ಅಲ್ಲಿಂದ ಹಲವಾರು ತೆರಿಗೆಗಳನ್ನು ವಸೂಲಿ ಮಾಡಿ ತಮ್ಮ ಭೊಕ್ಕಸವನ್ನು ತುಂಬಿಕೊಳ್ಳುತ್ತಿದ್ದರು. ಇವರ ಬೇಡಿಕೆಗಳನ್ನು ಪೂರೈಸಲು ದೇಶೀಯ ರಾಜರುಗಳು ತಮ್ಮ ಪ್ರಜೆಗಳ ಮೇಲೆ ಹೆಚ್ಚಿನ ತೆರಿಗೆ ವಿಧಿಸುತ್ತಿದ್ದರು. ಇದರಿಂದ ಜನರ ಸಂಕಷ್ಟಗಳು ದ್ವಿಗುಣವಾಯಿತಲ್ಲದೆ ಅವರು ಹೆಚ್ಚು ಹೆಚ್ಚು ಬಡತನಕ್ಕೊಳಗಾದರು.

ಹೀಗೆ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವ ಸ್ಥಳೀಯ ರಾಜ್ಯ ರಾಜಕಾರಣದ ಮೇಲೆ ಅಧಿಪತ್ಯವನ್ನು ಸ್ಥಾಪಿಸಿದ್ದಷ್ಟೇ ಅಲ್ಲದೇ, ಅಲ್ಲಿನ ಸಾಮಾಜಿಕ ಪರಿಸ್ಥಿತಿಯ ಬಗೆಗೂ ಹೆಚ್ಚಿನ ಗಮನ ಹರಿಸಿತು. ವಾಜಿದ್ ಅಲಿ ಖಾನನ ಆಳ್ವಿಕೆಯ ಸಂದರ್ಭದಲ್ಲಿ ಸ್ಥಳೀಯ ಜನಸಮುದಾಯಗಳ ನಡುವೆ ಇದ್ದಂತಹ ಜಾತಿ ಅರಾಜಕತೆಯನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತದೆ.

"ಈಚೆಗೆ ಗಲಭೆಗಳು, ಲೂಟಿಗಳು ಹೆಚ್ಚಿವೆ.................

ಕಳೆದೆರಡು ತಿಂಗಳಲ್ಲಿ ಶಿಯಾ ಮತ್ತು ಸುನ್ನಿಗಳ ನಡುವಿನ

ಜಗಳ ಸಾಕಷ್ಟು ಜೀವಗಳ ಬಲಿ ತೆಗೆದುಕೊಂಡಿದೆ."[೫]

ಎಂದು ಸ್ಥಳೀಯ ಜನರ ಜಾತಿ ರಾಜಕಾರಣದಿಂದ, ವೈಶಮ್ಯಗಳಿಂದ ಮುಗ್ಧ ಜೀವಗಳು ಬಲಿಯಾಗುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸುತ್ತದೆ. ಜೊತೆಗೆ ಇದೆಲ್ಲದಕ್ಕೂ ವಾಜಿದ್ ಅಲಿ ಖಾನನ ನಿರ್ಲಕ್ಷವೇ ಕಾರಣ ಎಂದು ದೂರುತ್ತಾನೆ. ಹೀಗೆ ಸಾಮಾಜಿಕ, ಜೀವನ ಪದ್ಧತಿಯ ಮೇಲೆ ಬ್ರಿಟೀಷ ವಸಾಹತುಶಾಹಿ ಪ್ರಭುತ್ವ ಹೆಚ್ಚು ಗಮನಹರಿಸುತ್ತಿರುವುದು ಒಳ್ಳೆಯ ಸಂಗತಿಯೇ. ಆದರೆ ಅದರ ಹಿಂದೆ ಕೂಡ ಸೂಕ್ಷ್ಮ ರಾಜಕೀಯ ತಂತ್ರ ಇರುವುದನ್ನು ಗಮನಿಸಬೇಕು. ರಾಜ್ಯ ರಾಜಕಾರಣದ ಬುನಾದಿಗಳು ಅಲ್ಲಿನ ಸ್ಥಳೀಯ ಜನವರ್ಗ. ಅವರೆಲ್ಲರನ್ನೂ ಒಂದುಗೂಡಿಸಿ ತನ್ನ ಅಧಿಪತ್ಯವನ್ನು ಭದ್ರಪಡಿಸಿಕೊಳ್ಳುವುದು ಅವರ ಹುನ್ನಾರವಾಗಿದ್ದಿತು.

ಬ್ರಿಟೀಷ ವಸಾಹತುಶಾಹಿ ಪ್ರಭುತ್ವ ಹೀಗೆ ದೇಶದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ತನ್ನ ಅಧಿಪತ್ಯವನ್ನು ಸ್ಥಾಪಿಸುತ್ತಾ ನಡೆದಿದ್ದರು. ವಾಜಿದ್ ಅಲಿ ಖಾನ್ ಯಾವುದೇ ರೀತಿಯ ಕ್ರಮಗಳನ್ನು ಕೈಗೊಳ್ಳದೆ ತನ್ನ ವಿಲಾಸಿ ಜೀವನದಲ್ಲಿಯೇ ಮುಳುಗಿದ್ದನು. ಇದನ್ನು ನಾಟಕದ ಹಾಡುಗಾರರು ಬಹಳ ಸ್ಪಷ್ಟವಾಗಿ ತಿಳಿಸಿಕೊಡುತ್ತಾರೆ.

"ಪುಂಗಿಯೂದಿ ಬೆರಗಾಗಿಸಿದನು

ಆ ಬಿಳಿಯ ನಾಡಿನವನು.

ಸಂಗೀತದಲ್ಲಿಯೇ ಮುಳುಗಿ ಎದ್ದನು

ನಮ್ಮ ಬಾದಶಹನು"[೬]

ಎಂದು ಹಾಡುಗಾರರು ವಸಾಹತುಶಾಹಿ ಪ್ರಭುತ್ವದ ಆಕ್ರಮಣ ನೀತಿ ಮತ್ತು ವಾಜಿದ್ ಅಲಿ ಖಾನನ ಸುಖ ಲೋಲುಪತೆ ಎರಡನ್ನೂ ಅಣಕಿಸುತ್ತಾರೆ. . ತಮ್ಮನ್ನು ಕಾಯಬೇಕಾದ ರಾಜನ ವೈಭವೋಪೇತ ಜೀವನದಲ್ಲಿ ಮುಳುಗಿ ಆಕ್ರಮಣಶೀಲರಿಗೆ ಸುಲಭ ದಾರಿ ಮಾಡಿ ಕೊಟ್ಟಿದ್ದನ್ನು ಬಹಳವಾಗಿ ಖಂಡಿಸುತ್ತಾರೆ.

ಹೀಗೆ ವಸಾಹತುಶಾಹಿ ಪ್ರಭುತ್ವದ ಆಕ್ರಮಣನೀತಿ ಮತ್ತು ವಾಜಿದ್ ಅಲಿ ಖಾನನ ಲೌಕಿಕ ಸುಖ–ಬೋಗಗಳನ್ನು ಹಾಡುಗಾರರಷ್ಟೇ ಅಲ್ಲದೆ ನಾಟಕದ ಪಾತ್ರಗಳೂ ಕೂಡ ಅಷ್ಟೇ ಉಗ್ರವಾಗಿ ಖಂಡಿಸುತ್ತಾರೆ ಮತ್ತು ಗೇಲಿಮಾಡುತ್ತಾರೆ.

“ಪರಂಗಿಯವರು ಅರಬನ ಒಂಟೆ ತರಹ.
ಮೊದಲು ತಲೆ ಮಾತ್ರ ಒಳಗೆ ಹಾಕಿದರು.
ಸುಲ್ತಾನರು ಅಲ್ಲೇ ಸರಿದು ಜಾಗ ಮಾಡಿಕೊಟ್ಟರು.
ಈಗ ಬಾಲ ಮಾತ್ರ ಹೊರಗಡೆ ಇದೆ.”

ಎಂದು ಹಸನ್ ಬ್ರಿಟೀಷರು ಹಂತ ಹಂತವಾಗಿ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಾ ಇಡೀ ಪ್ರದೇಶವನ್ನೇ ತನ್ನ ಕೈಗೆ ಹಸ್ತಾಂತರಿಸಿಕೊಂಡದ್ದನ್ನ ತಿಳಿಸುತ್ತಾನೆ. ವ್ಯಾಪಾರ ವ್ಯವಹಾರಕ್ಕೆಂದು ಭಾರತಕ್ಕೆ ಬಂದಂತಹ ಬ್ರಿಟೀಷರು ಒಂದು ದಶಕ ಕಳೆಯುವುದರೊಳಗೆ ಬಹುಪಾಲು ಪ್ರದೇಶಗಳನ್ನು ತನ್ನ ಕೈಗೆ ಹಸ್ತಾಂತರಿಸಿಕೊಂಡು ಬಿಟ್ಟಿತ್ತು. ಇದನ್ನೇ ಈ ನಾಟಕದಲ್ಲಿ ಬಹಳ ಸೂಕ್ಷ್ಮವಾಗಿ ವಿಮರ್ಶಿಸುತ್ತಾರೆ.

ಬ್ರಿಟೀಷರ ಇಂಥ ಆಗಮನಕ್ಕೆ ಸ್ಥಳೀಯ ರಾಜರ ಮೌನವನ್ನೂ ಇಲ್ಲಿ ಬಹಳ ಸೂಕ್ಷ್ಮವಾಗಿ ವಿಮರ್ಶಿಸುತ್ತಾರೆ. ಜೊತೆಗೆ ಅವರ ಲೌಕಿಕ ಸುಖ–ಭೋಗಗಳನ್ನು ಖಂಡಿಸುತ್ತಾರೆ. ಅವನು ರಾಜ್ಯ ರಾಜಕಾರಣವನ್ನು ಬಿಟ್ಟು, ರಾಜ್ಯವನ್ನು ಆಕ್ರಮಣಶೀಲರಿಂದ ಕಾಪಾಡುವುದನ್ನು ಬಿಟ್ಟು ಸದಾಕಾಲ ಸಂಗೀತ, ನೃತ್ಯ, ಮಧು, ಮಾನಿನಿಯರ ಜೊತೆ ಮುಳುಗಿರುವುದನ್ನು ಕಂಡು ಹಸನ್ ತೀವ್ರವಾಗಿ ಖಡಿಸುತ್ತಾನೆ.

“ನಮ್ಮ ಸುಲ್ತಾನರಿಗೆ ಸೈನ್ಯ ಕಟ್ಟಲಿಕ್ಕೆ ಸಮಯವಾದರೂ
ಎಲ್ಲಿದೆ.”
“ನಮ್ಮ ಸುಲ್ತಾನ ಪ್ರತೀ ವರ್ಷ ರಾಸಲೀಲೆ ನಾಟಕ
ಬರೆದು ಆಡ್ತಾನೆ. ತಾನೇ ಕೃಷ್ಣನ ಪಾತ್ರ ಮಾಡ್ತಾನೆ.
ಪ್ರತೀ ವರ್ಷ ಅವನ ರಾಸಲೀಲೆ ನಾಟಕ ನೋಡೋದಿಕ್ಕೆ
ಅಂತ ಹುಡುಗರು ಮುದುಕರು ಎಲ್ಲರೂ ಕಾವಿ ಬಟ್ಟೆ
ಹಾಕಿಕೊಂಡು ಕೈಸರಾಬಾದಿಗೆ ಹೋಗ್ತಾರೆ.”

ಎಂದು ಹಸನ್ ತಮ್ಮ ಸುಲ್ತಾನನ ಕೃತ್ಯಗಳನ್ನು ಶ್ರೀ ಕೃಷ್ಣನಿಗೆ ಹೋಲಿಸಿ ಅವನಂತೆಯೇ ಸಾವಿರಾರು ಗೋಪಿಕಾ ಸ್ತ್ರೀಯರೊಂದಿಗೆ ಮೈಮರೆತು ರಾಜ್ಯದ ಸಂಪೂರ್ಣ ಜವಾಬ್ದಾರಿಯನ್ನು ಕೈ ಬಿಟ್ಟಿದ್ದಾನೆಂದು ತಿಳಿಸುತ್ತಾನೆ. ನಮ್ಮಲ್ಲಿ 'ನೂಲಿನಂತೆ ಸೀರೆ ತಾಯಿಯಂತೆ ಮಗಳು' 'ಯಥಾಃ ರಾಜ ತಥಾಃ ಪ್ರಜಾ' ಎನ್ನುವ ಮುಂತಾದ ಗಾದೆಗಲಿವೆ. ಅಂದದರೆ ನಮ್ಮನ್ನ ನೋಡಿಕೊಳ್ಳುವ, ಆಳುವ ನಾಯಕರು ಹೇಗಿರುತ್ತಾರೋ ಅವನ ಕೈಕೆಳಗೆ ಬೆಳೆಯುವವರೂ ನಾವೂ ಅದೇ ರೀತಿ ಇರುತ್ತೇವೆ. ನಾಯಕ ಯಾವ ಮಾರ್ಗವನ್ನು ಅನುಸರಿಸುತ್ತಾನೋ ಅವನ ಹಿಂಬಾಲಕರು ಅದೇ ಮಾರ್ಗವನ್ನು ಅನುಸರಿಸುತ್ತಾರೆ. ರಾಜನು ಉತ್ತಮನಾಗಿದ್ದರೆ ಅವನ ಪ್ರಜೆಗಳು ಉತ್ತಮ ಮಾರ್ಗವನ್ನೇ ಅನನುಸರಿಸುತ್ತಾರೆ. ರಾಜ ದುಷ್ಟ, ದುರಾಚಾರಿಯಾಗಿದ್ದರೆ ಆ ರಾಜ್ಯದ ಪ್ರಜೆಗಳು ದುಷ್ಟರೂ, ದುರಾಚಾರಿಗಳೂ ಆಗಿರುತ್ತಾರೆ. ವಾಜಿದ್ ಅಲಿ ಖಾನನ ಕುಕೃತ್ಯಗಳನ್ನು ತಿಳಿದಿದ್ದ ಅವನ ಪ್ರಜೆಗಳು ಅವನ ಮಾರ್ಗವನ್ನೇ ಅನುಸರಿಸುವುದಲ್ಲದೆ, ಅವನ ಕೃತ್ಯಗಳಿಗೆ ಪ್ರೋತ್ಸಾಹಗಳನ್ನು ನೀಡುತ್ತಾರೆ. ದೇಶದ ಇಂಥ ಪರಿಸ್ಥಿತಿಯನ್ನು ಹಸನ್ ಹೀಗೆ ತಿಳಿಸುತ್ತಾನೆ :

"ಇಡೀ ಲಖನೌ ಪಟ್ಟಣವೇ ಕೆಟ್ಟು ಹೋಗಿದೆ." ಜೊತೆಗೆ ರಾಜ್ಯದಲ್ಲಿ ಇಂಥ ದುಸ್ಥಿತಿ ನಿರ್ಮಾಣ ಆಗಿರುವುದಕ್ಕೆ ಬಹಳವಾಗಿ ಮರುಗುತ್ತಾನೆ. 'ದಂಗೆಯ ಮುಂಚಿನ ದಿನಗಳು' ನಾಟಕದಲ್ಲಿ ದೇಶದ ಇಂಥ ಹದಗೆಟ್ಟ ಸ್ಥಿತಿಯನ್ನು ವಿವರಿಸಲೆಂದೇ ಮೀರ್ ಮತ್ತು ಮಿರ್ಜಾರ ಪಾತ್ರವನ್ನು ಸಮರ್ಪಕವಾಗಿ ಪ್ರಸನ್ನ ಅವರು ಬಳಸಿಕೊಂಡಿದ್ದಾರೆ.

ಮೀರ್ ಮತ್ತು ಮಿರ್ಜಾ ಲಖನೌ ಪಟ್ಟಣದ ಪ್ರತಿಷ್ಠಿತ ವ್ಯಕ್ತಿಗಳು. ಇವರು ರಾಜ್ಯ ರಾಜಕಾರಣದ ಪ್ರಮುಖ ಪ್ರತಿನಿಧಿಗಳೂ ಆಗಿದ್ದರು. ಹಾಗಾಗಿ ಇವರಲ್ಲಿ ಹಣ ಮತ್ತು ಅಧಿಕಾರ ಎರಡೂ ಇದ್ದಿತು. ಆದರೆ ಇದೆರಡನ್ನೂ ಸರಿದೂಗಿಸಿಕೊಂಡು ಹೋಗಲಾರದೆ ಅಧಿಕಾರದ ಜವಾಬ್ದಾರಿಯುತ ಕೆಲಸಗಳನ್ನು ಬಿಟ್ಟು ಹಣದ ನೆರಳಿನಲ್ಲಿ ಹಾಯಾಗಿ ದಣಿವಾರಿಸಿಕೊಳ್ಳುತ್ತಿದ್ದರು. ಸದಾಕಾಲ ಎಲ್ಲಾ ಕೆಲಸ-ಕಾರ್ಯಗಳನ್ನು ಬಿಟ್ಟು ಚದುರಂಗದ ಹಾಸಿನ ಮುಂದೆಯೇ ಠಳಾಯಿಸಿರುತ್ತಾರೆ. ಇದು ಅವರನ್ನು ಒಂದು ರೀತಿ ಉತ್ಸಾಹಹೀನರನ್ನಾಗಿ, ನಿಸ್ತೇಜರನ್ನಾಗಿ ಮಾಡಿದೆ. ಇಂಥ ಜಡತೆ ಮೀರ್ ಮತ್ತು ಮಿರ್ಜಾರ ಹೆಂಡತಿ ಮತ್ತು ಕೆಲಸಗಾರರಲ್ಲಿ ತೀವ್ರವಾದ ಆಕ್ರೋಶವನ್ನುಂಟು ಮಾಡಿದೆ.

"ನನ್ನ ಗಂಡನಿಗಂತೂ ಅಫೀಮಿನ ಅಮಲು, ಚದುರಂಗದ
ಅಮಲು ಎರಡೂ ಸೇರಿ ಬಿಟ್ಟಿದೆ. ಚದುರಂಗಕ್ಕೆ ಕೂತು

ಬಿಟ್ಟರು ಅಂದರೆ ಅವರಿಗೆ ಬುಡಕ್ಕೆ ಗೆದ್ದಲು ಹಿಡಿದರೂ ಗೊತ್ತಾಗಲ್ಲ.

ಅಲ್ಲೇ ಪಾನ್, ಅಲ್ಲೇ ಮಿಠಾಯಿ, ಅಲ್ಲೇ ಊಟ. ಎಲ್ಲಾ ಅಲ್ಲೇ ಆಗಬೇಕು."[೮]

ಹೀಗೆ ಮಿರ್ಜಾನ ಹೆಂಡತಿ ತನ್ನ ಗಂಡ ಚದುರಂಗದ ಅಮಲಿನಲ್ಲಿ ಇಡೀ ಲೋಕವನ್ನೇ ಮರೆತು ಕೂತಿರುವುದನ್ನು ತೀವ್ರವಾಗಿ ಖಂಡಿಸುತ್ತಾಳೆ. ಮದುವೆಯಾಗಿ ಬಂದಾಗಿನಿಂದ ತನ್ನ ಬಗ್ಗೆ; ತನ್ನ ಸಂತೋಷದ ಬಗ್ಗೆ; ತನ್ನ ಸಂಸಾರದ ಸುಖ-ದುಃಖಗಳ ಬಗ್ಗೆ ಎಳ್ಳಷ್ಟೂ ಯೋಚನೆ ಮಾಡದೇ, ಸದಾಕಾಲ ಚದುರಂಗದ ಮುಂದೆ ಕೂತು ಕಾಲಹರಣ ಮಾಡುವ ತನ್ನ ಗಂಡನ ಜಡತೆಯ ಬಗೆಗೆ ಮರುಗುತ್ತಾಳೆ. ಈ ಚದುರಂಗದ ಆಟದ ಜೊತೆಗೆ ಅವನ ಸಂಗೀತ, ಮಧು, ಮಾನಿನಿಯರ ದುಷ್ಟ ಚಟಗಳ ಬಗೆಗೆ ತೀವ್ರವಾಗಿ ರೋಧಿಸುತ್ತಾಳೆ ಮತ್ತು ಇದಕ್ಕೆಲ್ಲಾ ಸಂಪೂರ್ಣ ಹೊಣೆ ವಾಜಿದ್ ಅಲಿ ಖಾನ್ ಎಂದು ದೂರುತ್ತಾಳೆ.

"ನಾನು ಇಲ್ಲಿಗೆ ಬಂದಾಗಿನಿಂದ ಇವರ ಜೊತೆ

ಮಾತನಾಡಿದ್ದೇ ಕಡಿಮೆ. ನಾನು ಏಳೋಕೆ ಮುಂಚೇನೇ

ಎದ್ದು ನಾಷ್ಟ ಮುಗಿಸಿ ಚದುರಂಗಕ್ಕೆ ಕೂತು ಬಿಡುತ್ತಾರೆ.

ಸಂಜೆ ಆಯ್ತು ಅಂದರೆ ತಾನೊಬ್ಬ ಸಂಗೀತ ಪ್ರೇಮಿ ಅಂತ

ಹೇಳ್ಕೊಂಡು ಯಾವುದಾದರೂ ಸೂಳೆ ಮನೆಗೆ ಪೋಲಿ ಗಜಲ್

ಕೇಳ್ಕೊಂಡು ಹೋಗ್ತಾರೆ. ಎಷ್ಟೋ ದಿವಸ ರಾತ್ರಿಯೆಲ್ಲಾ ಮನೇಗೆ ಬರಲ್ಲ."[೯]

ಹೀಗೆ ತನ್ನ ಗಂಡ ಲೌಕಿಕವಾದ ಸುಖ-ಭೋಗಗಳಲ್ಲಿ; ಅನೈತಿಕ ಸಂಬಂಧಗಳಲ್ಲಿ ಸಂಪೂರ್ಣವಾಗಿ ಮುಳುಗಿ ಕರ್ತವ್ಯ ಭ್ರಷ್ಟನಾಗಿರುವುದನ್ನು ತಿಳಿಸುತ್ತಾಳೆ. ತನ್ನ ಬಗೆಗೆ ಮಿರ್ಜಾನಲ್ಲಿದ್ದಂತಹ ನಿರ್ಲಕ್ಷತೆಯನ್ನು ಕಂಡು ಹಳಹಳಿಸುತ್ತಾಳೆ. ತನ್ನ ಗಂಡನ ಇಂಥ ಕೃತ್ಯಗಳಿಗೆ ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಸುಲ್ತಾನ್ ವಾಜಿದ್ ಅಲಿ ಖಾನನೇ ಕಾರನ ಎಂದು ದೂರುತ್ತಾಳೆ.

" 'ಬೇಲೀನೇ ಎದ್ದು ಹೊಲ ಮೇದ ಹಾಗೆ' ಅಂತ ನಮ್ಮ ಕಡೆ

ಗಾದೆ ಹೇಳ್ತಾರೆ. ವಾಜಿದ್ ಅಲಿ ಶಹ ಅವರೇ ಯಾವಾಗಲೂ

ಸೂಳೆಯರ ಮಡಿಲಲ್ಲಿ ಬಿದ್ದಿರ್ತಾರಂತೆ. ಮೂರೂ ಹೊತ್ತು ಅಫೀಮು,

ಸಂಗೀತ ಅಂತ ರಾಜ್ಯ ಆಳೋದನ್ನ ಮರೆತು ಕೂತಿರ್ತಾರಂತೆ. ಅವರೇ

ಹೀಗಾದರೆ ಇವರು ಇನ್ನೇನಾಗಬೇಕು ಯೋಚನೆ ಮಾಡಿ."

"ಇವತ್ತು ಲಖನೌದಲ್ಲಿ ಸೂಳೆಯರಿಗೇ ಕಾಲ."[೯]

ಹೀಗೆ ರಾಜನ ಹಾದಿಯನ್ನೇ ಹಿಡಿದು ಹೊರಟ ಪ್ರಜೆಗಳ ಗತಿ ಏನು? ಅವರನ್ನು ನಂಬಿಕೊಂಡವರ ಗತಿ ಏನು? ತಮ್ಮ ಆಪ್ತರೆನ್ನಿಸುವವರೆಲ್ಲರೂ ಇದ್ದೂ ಕೂಡ ಲೋಕದಲ್ಲಿ ಅನಾಥರಂತೆ, ಅಸಹಾಯಕರಂತೆ ಬದುಕುವ ಮುಗ್ಧ ಚೇತನಗಳ ಸ್ಥಿತಿ ಹೇಗಿರುತ್ತದೆ ಎಂಬುದನ್ನು ಇಲ್ಲಿ ಅನಾವರಣ ಗೊಳಿಸಲಾಗಿದೆ. ಮಿರ್ಜಾನ ಹೆಂಡತಿ ಕೊನೆಗೆ ತನ್ನ ಗಂಡನನ್ನು ಹೇಗಾದರೂ ಮಾಡಿ ಈ ಚದುರಂಗದ ಅಮಲಿನಿಂದ ದೂರ ಮಾಡಲೇಬೇಕೆಂದು ತನ್ನ ಮನೆಯಿಂದ ಚದುರಂಗದ ಹಾಸನ್ನು ಮತ್ತು ಕಾಯಿಗಳನ್ನು ಬೀದಿಗೆ ಬಿಸಾಡುತ್ತಾಳೆ.

ಮಿರ್ಜಾನ ಮನೆಯಿಂದ ಬೀದಿಗೆ ಬಿದ್ದ ಚದುರಂಗದ ಆಟಗಾರರು ತಮ್ಮ ಜವಾಬ್ದಾರಿಯನ್ನು ಅರ್ಥ ಮಾಡಿಕೊಳ್ಳಲಾರದೇ ಬಿದ್ದ ಬೀದಿಯಲ್ಲಿಯೇ ಆಟವನ್ನು ಮುಂದುವರಿಸುತ್ತಾರೆ. ಇವರುಗಳ ಆಟದ ಇಂಥ ನಿರಂತರತೆಯನ್ನು ಕಂಡು ದಾರಿಹೋಕರು ಗೇಲಿಮಾಡಿ ನಗುತ್ತಾರೆ.

"ಬಿಸಿಲು ತಂಪಾಗಿದೆ ಅಂತ ಮನೆ ಹೊರಗಡೆ ಚದುರಂಗ ಆಡ್ತಾ

ಕೂತಿರೋ ಹಾಗಿದೆ?"

"ಮನೆ ಒಳಗಡೆ ವಿಪರೀತ ಸೊಳ್ಳೆ ಕಾಟ ಅಂತ ಕಾಣುತ್ತೆ ಬೀಸಣಿಗೆ

ಹಾಕಲಿಕ್ಕೆ ಜನ ಇರಲಿಲ್ಲವಾ ಸ್ವಾಮಿ!"[೧೦]

ಹೀಗೆ ನಾನಾ ಬಗೆಯಾಗಿ ಗೇಲಿ ಮಾಡಿಕೊಂಡು ನಗುತ್ತಾರೆ. ಇವರ ಇಂಥ ಮಾತುಗಳು ಮೀರ್ ಮತ್ತು ಮಿರ್ಜಾರ ಮೇಲೆ ಯಾವುದೇ ರೀತಿಯ ಪರಿಣಾಮ ಬೀರಲಿಲ್ಲ, ಬದಲಿಗೆ ಅವರನೇ ದೂಷಿಸುತ್ತಾ ಆಟವನ್ನು ಇನ್ನಷ್ಟು ತೀವ್ರಗೊಳಿಸುತ್ತಾರೆ. ವಾಜಿದ್ ಅಲಿ ಖಾನನು ಸಹ ರಾಜ್ಯ ರಾಜಕಾರಣವನ್ನು ನಿರ್ಲಕ್ಷಿಸಿ ವೈಭವೋಪೇತ ಜೀವನದಲ್ಲಿ ಮುಳುಗಿರುವುದನ್ನು ಕಂಡು ಹೊರಗಿನಿಂದ ಬಂದ ಬ್ರಿಟೀಷ್ ರೆಸಿಡೆಂಟ್ ಗೇಲಿ ಮಾಡಿದರೂ ಅದನ್ನು ತಿಳಿಯಲಾರದೇ ಹೋದನು. ತನ್ನ ಐಶಾರಾಮಿ ಜೀವನವನ್ನು ಹಾಗೇ ಉಳಿಸಿಕೊಳ್ಳುವನು.

ಮೀರ್ ಮತ್ತು ಮಿರ್ಜಾ ತಮ್ಮ ಚದುರಂಗದ ಆಟವನ್ನು ಈಗ ಮೀರ್‌ನ ಮನೆಯಲ್ಲಿ ಮುಂದುವರಿಸುವ ನಿರ್ಧಾರ ಮಾಡುತ್ತಾರೆ. ಇವರ ಈ ನಿರ್ಧಾರ ಮೀರ್‌ನ ಹೆಂಡತಿಯಲ್ಲಿ, ಅವನ ಮನೆಯ ಕೆಲಸಗಾರರಲ್ಲಿ ಮತ್ತು ಮೀರ್ ಬೇಗಂನ ಪ್ರಿಯಕರ ಹಸನ್‌ನ್ನಲ್ಲಿ ತೀವ್ರವಾದ ಬೇಸರವನ್ನುಂಟು ಮಾಡುತ್ತದೆ.

ಮದುವೆಯಾಗಿ ಗಂಡನ ಮನೆಗೆ ಬಂದ ಹೆಣ್ಣಿನ ಮನಸ್ಸಿನಲ್ಲಿ ಹಲವಾರು ಆಸೆ, ಆಕಾಂಕ್ಷೆಗಳು ಇರುತ್ತವೆ. ಅದನ್ನು ಪೂರೈಸಬೇಕಾದದ್ದು ಗಂಡನ ಕರ್ತವ್ಯ. ಆದರೆ ಮೀರ್ ಸಾಹೇಬ್ ಮದುವೆ ಮಾಡಿಕೊಂಡು ಕರೆತಂದ ತನ್ನ ಹೆಂಡತಿಯ ಆಗು-ಹೋಗುಗಳನ್ನು, ಬೇಕು-ಬೇಡಗಳನ್ನು ವಿಚಾರಿಸದೆ ಸದಾಕಾಲ ಮಿರ್ಜಾನ ಮನೆಯಲ್ಲಿ ಚದುರಂಗದ ಆಟದಲ್ಲಿ ಕಾಲಹರಣ ಮಾಡುತ್ತಿದ್ದದ್ದನ್ನು ಕಂಡು ಅವಳಲ್ಲಿ ಬೇಸರ ಮೂಡಿದ್ದಿತ್ತು. ಸದಾಕಾಲ ಒಂಟಿಯಾಗಿ ಮನೆಯಲ್ಲಿ ಇರುವುದು ಅವಳಿಗೆ ಸೆರೆವಾಸಕ್ಕಿಂತ ಹೆಚ್ಚಿನ ಹಿಂಸೆಯನ್ನ ತಂದೊಡ್ಡಿದ್ದಿತು. ಈ ಸೆರೆಯಿಂದ ಹೇಗಾದರೂ ಮಾಡಿ ಬಿಡಿಸಿಕೊಳ್ಳಲು ಹವಣಿಸುತ್ತಿದ್ದಾಗ ಅವಳಿಗೆ ನೆರವಾದವನು ಹಸನ್. ತನ್ನ ಶ್ರೀಮಂತ ಗಂಡನಲ್ಲಿ ಸಿಗದ ಪ್ರೀತಿ, ಆತ್ಮೀಯತೆ ಬಡವನಾದ ಹಸನ್‌ನಲ್ಲಿ ಕಂಡು ಅವನೆಡೆಗೆ ಆಕರ್ಷಿತಳಾಗುತ್ತಾಳೆ. ತನ್ನ ಶ್ರೀಮಂತ ಗಂಡನಲ್ಲಿದ್ದ ಅಫೀಮು, ಜೂಜು, ಮಧು, ಮಾನಿನಿ ಎಂಬಂಥ ಮುಂತಾದ ಚಟಗಳು ಅವನಿಗೆ ಇಲ್ಲದಿದ್ದದ್ದನ್ನು ಕಂಡು ಸಂತೋಷಿಸುತ್ತಾಳೆ.

> "ಹಸನ್ ಶ್ರೀಮಂತ ಅಲ್ಲದೇ ಇರುವುದು ನನ್ನ ಅದೃಷ್ಟ.
> ಕಾಸಿಲ್ಲದ್ದಕ್ಕೆ ಹೆಚ್ಚು ಅಫೀಮಿನ ಚಟ ಇಲ್ಲ. ಹೆಂಗಸರ
> ವಿಷಯಾನೂ ಅಷ್ಟೇ."[೧೧]

ಎಂದು ಅವನು ಬಡವನಾಗಿರುವುದೇ ಅವಳಿಗೆ ಹಿಡಿಸಿದಂತೆ ಮಾತನಾಡುತ್ತಾಳೆ. ಇದು ಒಂದು ರೀತಿ ಸಾರ್ವಕಾಲಿಕ ಸತ್ಯವೆಂದೇ ಹೇಳಬಹುದು. ಹಣ, ಅಧಿಕಾರಗಳು ಇದ್ದ ಕಡೆ ಹೆಚ್ಚಿನಪಾಲು ಪ್ರೀತಿಗೆ ಜಾಗವೇ ಇರುವುದಿಲ್ಲ. ಆದರೆ ಎಲ್ಲಿ ಪ್ರೀತಿ ಇರುತ್ತದೊ ಅಲ್ಲಿ ಹಣಕ್ಕೆ ಬೆಲೆಯೇ ಇರುವುದಿಲ್ಲಾ ಎಂಬ ವಾಸ್ತವವಾದ ಮತ್ತು ಸಾರ್ವಕಾಲಿಕ ಸತ್ಯವನ್ನು ಇಲ್ಲಿ ತಿಳಿಸಲು ಪ್ರಯತ್ನಿಸಿದ್ದಾರೆ.

ಹೀಗೆ ಪ್ರಿಯಕರನ ಪ್ರೀತಿಯಲ್ಲಿ ನೆಮ್ಮದಿಯನ್ನು ಕಾಣುತ್ತಿದ್ದ ಮೀರ್‌ನ ಹೆಂಡತಿಗೆ ಮೀರ್ ಮತ್ತು ಮಿರ್ಜಾ ತನ್ನ ಮನೆಯಲ್ಲಿಯೇ ಚದುರಂಗದ ಆಟವನ್ನು ಪ್ರಾರಂಭಿಸಿದ್ದು ಬೇಸರವನ್ನುಂಟು ಮಾಡುತ್ತದೆ. ಏನು ಮಾಡಬೇಕೆಂದು ತೋರದೆ ತನ್ನ ಕೋಣೆಯಲ್ಲಿ ಒಂಟಿಯಾಗಿ ಚಿಂತಿಸತೊಡಗುತ್ತಾಳೆ.

ಮೀರ್‌ನ ಮನೆಕೆಲಸದವರು ಮೊದಲು ಯಾರ ಅಂಕೆ-ಶಂಕೆಯಿಲ್ಲದೆ ನೆಮ್ಮದಿಯಿಂದ ಇದ್ದರು. ಆದರೆ ಯಾವಾಗ ಮೀರ್ ಮನೆಯಲೇ ಚದುರಂಗದ ಆಟವನ್ನು ಪ್ರಾರಂಭಿಸಿದನೋ ಅಂದಿನಿಂದ

ಇವರ ಕೆಲರ–ಕಾರ್ಯಗಳು ಹೆಚ್ಚಾದವು. ಜೊತೆಗೆ ಶ್ರೀಮಂತರ ದರ್ಪ, ದಬ್ಬಾಳಿಕೆಗೆ ತುತ್ತಾದರು. ಇದರಿಂದ ಅವರಲ್ಲಿ ಹೆಚ್ಚು. ಬೇಸರ ಮತ್ತು ಹಿಂಸೆಗಳು ತಲೆದೋರಿದವು.

> "ಆಟಕ್ಕೆ ಒಂದು ಹೊತ್ತುಗೊತ್ತು ಗುರಿ ಅಂತ ಬೇಡವಾ?
> ಬೆಳಗ್ಗೆ ಕೂತರೆ ರಾತ್ರೆಗೇ ಮುಗಿಸೋದು ಅಂದರೆ
> ಅದೆಂಥ ಆಟ ಅಂತೀನಿ."[೨]

ಹೀಗೆ ಚದುರಂಗದ ಆಟಗಾರರ ನಿರಂತರತೆಯನ್ನು ಕಂಡು ಚಕಿತರಾಗುತ್ತಾರೆ. ಆಟ, ಸಾಂಸ್ಕೃತಿಕ ಕಾರ್ಯಕ್ರಮಗಳು ಯಾವುದೇ ಆದರು ನಮ್ಮ ಜೀವನದ ಜಂಜಾಟಗಳಿಂದ ಬಿಡುಗಡೆಯನ್ನು ಪಡೆಯಲು ಇರುವಂತಹ ಸಾಧನಗಳು. ಆದರೆ ಅದನ್ನೇ ನಿರಂತರವನ್ನಾಗಿ ಮಾಡಿಕೊಂಡ ಚದುರಂಗದ ಆಟಗಾರರು ಮತ್ತು ವಾಜಿದ್ ಅಲಿ ಖಾನ್ ಅದರಿಂದಲೇ ಅಧಃಪತನ ಹೊಂದಿರುವುದನ್ನು ಇಲ್ಲಿ ಸೂಚಿಸಲಾಗುತ್ತಿದೆ.

ಒಂದು ಕೈನ ಐದು ಬೆರಳುಗಳು ಹೇಗೆ ಒಂದೇ ರೀತಿ ಇರುವುದಿಲ್ಲವೊ ಹಾಗೇ ದೇಶದ ಎಲ್ಲಾ ಪ್ರದೇಶಗಳ ಪರಿಸ್ಥಿತಿ ಒಂದೇ ರೀತಿ ಇರುವುದಿಲ್ಲ. ಒಂದೆಡೆ ಹಣ, ಅಧಿಕಾರ ಹೆಚ್ಚಾಗಿ ಅವರಲ್ಲಿ ಲೌಕಿಕ ಸುಖಾಪೇಕ್ಷೆಗಳು ಅಧಿಕವಾಗಿದ್ದರೆ, ಮತ್ತೊಂದೆಡೆ ತಮ್ಮ ಪ್ರಾಥಮಿಕ ಅವಶ್ಯಕತೆಗಳನ್ನೂ ಪೂರೈಸಿಕೊಳ್ಳಲು ಸಂಕಟ ಪಡುತ್ತಾರೆ.

> "ಹಳ್ಳಿಲಿ ಜನ ಒಪ್ಪತ್ತಿಗೆ ಊಟಕ್ಕಿಲ್ಲದೆ ಸಾಯ್ತಿದಾರಂತೆ.
> ಜಾನುವಾರುಗಳಿಗೆ ಮೇವಿಲ್ಲವಂತೆ..............
> ಇಲ್ಲಿ ಲಖನೌನಲ್ಲಿ ಜನ ರೊಟ್ಟಿ ತಿನ್ನೋದನ್ನೂ ಮರೆತು
> ಅಫೀಮು ತಿನ್ತಾ ಇದಾರೆ. ಗಾಳಿ ಕುಡಿಯೋದನ್ನ ಬಿಟ್ಟು
> ಗಾಂಜ ಸೇದ್ತಾರೆ. ಈ ಶ್ರೀಮಂತರು ಮಜಾ ಮಾಡೋದಕ್ಕೂ
> ಒಂದು ಮಿತಿ ಬೇಡವಾ? ಊರಲ್ಲಿ ಸೂಳೆಯರು, ತಲೆ ಹಿಡುಕರು,
> ಗಾಂಜಾ ಮಾರೋವ್ರು, ಹಿಜಡಾಗಳನ್ನು ಬಿಟ್ಟರೆ ಬೇರೆಯವರು ಉದ್ಧಾರ
> ಆಗೋ ಹಾಗೇ ಇಲ್ಲ. ಥತ್."[೩]

ಎಂದು ಮೀರ್ ಮನೆಯ ಕೆಲಸದ ಜಮೀಲ್ ಗೊಣಗುತ್ತಾನೆ. ಲೋಕದಲ್ಲಿನ ಇಂಥ ಅರಾಜಕತೆಯನ್ನು, ವೈರುಧ್ಯವನ್ನು ಬಹಳವಾಗಿ ಖಂಡಿಸುತ್ತಾನೆ. ನಮ್ಮಲ್ಲಿ 'ಹಲ್ಲಿದ್ದವರಿಗೆ ಕಡಲೆ ಇಲ್ಲ, ಕಡಲೆ ಇದ್ದವರಿಗೆ ಹಲ್ಲಿಲ್ಲ.' ಎಂಬ ಗಾದೆಯಿದೆ. ಹಣ, ಅಧಿಕಾರ ಉಳ್ಳವರಿಗೆ ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂದು ತಿಳಿಯುವುದಿಲ್ಲ. ಅವೆರಡೂ ಇಲ್ಲದವರು ಅವುಗಳಿಗಾಗಿ ಹಂಬಲಿಸುತ್ತಿರುತ್ತಾರೆ. ಸಮಾಜದ ಇಂಥ ಏರುಪೇರುಗಳನ್ನು ಕಂಡು ಪ್ರತಿಯೊಬ್ಬರಲ್ಲಿಯೂ ಮರುಕ ಉಂಟಾಗುತ್ತದೆ.

ಮೀರ್ ಮತ್ತು ಮಿರ್ಜಾರ ಚದುರಂಗದಾಟದ ಜಡತೆಯಿಂದ ಅವರ ಹೆಂಡತಿಯರು, ಕೆಲಸಗಾರರು ಪ್ರತಿಯೊಬ್ಬರಲ್ಲಿಯೂ ಬೇಸರವನ್ನುಂಟು ಮಾಡಿರುವುದಲ್ಲದೆ, ಅದನ್ನು ಹೇಗಾದರೂ ಮಾಡಿ ಮೀರಲೇಬೇಕೆಂದು ತುಡಿಯುತ್ತಿದ್ದರು. ಆ ಕಾರಣಕ್ಕಾಗಿಯೇ ಎಲ್ಲರೂ ಸೇರಿ ಒಂದು ಹಂಚಿಕೆಯನ್ನು ಹೂಡಿದರು. ಹಸನ್ ವೇಶ ಬದಲಿಸಿಕೊಂಡು ಸೈನಿಕನಂತೆ ಮೀರ್‌ನ ಮನೆಗೆ ಬಂದು ಸುಲ್ತಾನರು ಕರೆ ಕಳುಹಿಸಿದ್ದಾರೆಂದು ತಿಳಿಸುತ್ತಾನೆ.

ಇದನ್ನು ಕೇಳಿದ ಮೀರ್ ಸಾಹೇಬ್ ಬಹಳವಾಗಿ ಕಂಗಾಲಾರುತ್ತಾನೆ. ತನ್ನ ನೆಮ್ಮದಿಯಾದ, ಆರಾಮವಾದ ಜೀವನದಲ್ಲಿ ರಾಜ್ಯದ ರಾಜಕಾರಣದ ಜವಾಬ್ದಾರಿ ಹೊರುವುದು ಅವನಿಗೆ ಅಸಾಧ್ಯವಾಗಿ ತೋರುತ್ತದೆ. ಈ ಕಾರಣಕ್ಕಾಗಿಯೇ ಅವರಿಬ್ಬರೂ ಅಲ್ಲಿಂದಲೂ ಪಲಾಯನ ಹೊಂದುತ್ತಾರೆ. ಹೀಗೆ ಅವರು ತಮ್ಮ ಜವಾಬ್ದಾರಿಗಳಿಂದ ವಿಮುಖರಾಗಿ ಓಡುತ್ತಿರುವುದು ಕಡೆಗೆ ಅವರಪಾಲಿಗೇ ಮುಳುವಾಗಿ ಪರಿಣಮಿಸುತ್ತದೆ. ಇವರ ಇಂಥ ವರ್ತನೆಗಳೇ ಹಸನ್ ಮತ್ತು ಇತರರು ಹೂಡಿದ ಹಂಚಿಕೆ ಸುಲಭವಾಗಿ ಸಫಲವಾಗಲು ಕಾರಣವಾದದ್ದು.

ಇತ್ತ ವಾಜಿದ್ ಅಲಿ ಖಾನನೂ ಸಹ ತನ್ನ ಜವಾಬ್ದಾರಿಗಳನ್ನು ಮರೆತು ನೆಮ್ಮದಿಯಿಂದ ಇದ್ದುದರಿಂದಲೇ ಬ್ರಿಟೀಷರು ಯಾವುದೇ ಪ್ರತಿಭಟನೆ ಇಲ್ಲದೆ ಬಹಳ ಸುಲಭವಾಗಿ ಇಡೀ ಲಖನೌ ಪಟ್ಟಣವನ್ನುಆಕ್ರಮಿಸಿಕೊಂಡರು.

"ತಮ್ಮ ಬಾದಶಾಹಿಯ ಕಡೆಯಿಂಧ ನಮ್ಮ ಕಂಪನಿಗೆ
ಸಂದಾಯವಾಗದೆ ಉಳಿದಿರುವ ಸಾಲದ ಮೊತ್ತ
ದೊಡ್ಡದಿದೆ ಹಾಗೂ ಅವಧದ ರಾಜಕೀಯ ಪರಿಸ್ಥಿತಿ,
ಕಾನೂನು ಹಾಗೂ ಶಿಸ್ತು ಪಾಲನೆಯ ಪರಿಸ್ಥಿತಿ ತೀರ

ಹದಗೆಟ್ಟಿರುವುದನ್ನು ಮನಗಂಡು ಅವಧದ ರಾಜಕಾರ್ಯದ
ಹೊರೆಯನ್ನು ತಮ್ಮಿಂದ ನಾವು ವಹಿಸಿಕೊಳ್ಳುವುದೆಂದು
ನಿರ್ಧರಿಸಿದ್ದೇವೆ."[೧೪]

ಎಂದು ಬ್ರಿಟೀಷ್ ರೆಸಿಡೆಂಟ್ ಲಖನೌ ಸುಲ್ತಾನ ವಾಜಿದ್ ಅಲಿ ಖಾನ್‌ನಿಂದ ರಾಜ್ಯ ರಾಜಕಾರಣದ ಹೊಣೆಯನ್ನು ಕಸಿದುಕೊಂಡು ತನ್ನ ಗವರ್ನರ್ ಜನರಲ್ ನೀಡಿದ ವರದಿಯನ್ನು ಸವಿವರವಾಗಿ ಓದುತ್ತಾನೆ.

"ಈ ಆಜ್ಞೆಯ ಮೇರೆಗೆ ಅವಧದ ರಾಜ್ಯವನ್ನು ಇನ್ನು ಮುಂದೆ ಬ್ರಿಟೀಷ
ಸಾಮ್ರಾಜ್ಯದಲ್ಲಿ ಸೇರಿಸಿಕೊಳ್ಳಲಾಗಿದೆ. ತಮಗೆ ಸಂಗೀತ ಹಾಗೂ ಕಲೆಗಳ
ಬಗ್ಗೆ ಇರುವ ಅಪಾರ ಅಭಿರುಚಿಯನ್ನು ಕಂಪೆನಿ ಸರ್ಕಾರ ಮನಗಂಡಿದೆ.
ಹಾಗೂ ತಾವು ಯಾವ ಚಿಂತೆಯೂ ಇಲ್ಲದಂತೆ ತಮ್ಮ ವಿಲಾಸಗಳಲ್ಲಿ
ತೊಡಗಲು ಸಾಧ್ಯವಾಗುವಂತೆ ತಮಗೆ ವರ್ಷಕ್ಕೆ ಹನ್ನೆರಡು ಲಕ್ಷ
ರೂಪಾಯಿಗಳನ್ನು ಮತ್ತು ತಮ್ಮ ಸಿಂಹಾಸನದ ಸಿಬಂಧಿ ವರ್ಗಕ್ಕೆ ಮೂರು
ಲಕ್ಷ ರೂಪಾಯಿಗಳನ್ನು ನಮ್ಮ ಘನ ಸರ್ಕಾರ ಪೆನ್‌ಶನ್
ಮಾದರಿಯಲ್ಲಿ ಮಂಜೂರು ಮಾಡಿದೆ."[೧೫]

ಎಂದು ಮುಂತಾದಾಗಿ ಬ್ರಿಟೀಷ್ ರೆಸಿಡೆಂಟ್ ವರದಿಯನ್ನು ಓದುತ್ತಾನೆ. ಬ್ರಿಟೀಷ ವಸಾಹತುಶಾಹಿ ಪ್ರಭುತ್ವ ಲಖನೌ ಪಟ್ಟಣವನ್ನು ವಶಪಡಿಸಿಕೊಂಡದ್ದಲ್ಲದೇ ವಾಜಿದ್ ಅಲಿ ಖಾನನ ಸಾಂಸ್ಕೃತಿಕ ವಿಲಾಸೀ ಜೀವನಕ್ಕೆ ಇನ್ನಷ್ಟು ಪುಷ್ಟಿಯನ್ನು ನೀಡುತ್ತಾರೆ. ಇದರ ಹಿಂದೆಯೂ ಬ್ರಿಟೀಷರ ಬಹಳ ದೊಡ್ಡ ಹುನ್ನಾರವೇ ಅಡಗಿದೆ. ಸುಲ್ತಾನನು ಎಷ್ಟು ಕಾಲ ಅವುಗಳಲ್ಲಿ ತಲ್ಲೀನನಾಗಿರುವನೋ ಅಲ್ಲಿಯವರೆಗೆ ತಮ್ಮ ಅಧಿಪತ್ಯಕ್ಕೆ ಯಾವುದೇ ರೀತಿಯ ದಕ್ಕೆ ಉಂಟಾಗುವುದುಲ್ಲ ಎಂಬುದು ಅವರ ಹುನ್ನಾರ. ಹಾಗಾಗಿಯೇ ಸುಲ್ತಾನನಿಗೆ ಬೇಕಾದದ್ದನ್ನು ನೀಡಿ ತಮ್ಮ ಸಾಮ್ರಾಜ್ಯವನ್ನು ಭದ್ರವಾಗಿ ಸ್ಥಾಪಿಸಿಕೊಂಡಿತು. ಈ ರೀತಿಯ ಹುನ್ನಾರ ಕೇವಲ ಲಖನೌ ಪಟ್ಟಣದಲ್ಲಿ ಮಾತ್ರ ನಡೆಯಲಿಲ್ಲ, ಬದಲಿಗೆ ಭಾರತದ ಬಹುಪಾಲು ಪ್ರದೇಶಗಳಲ್ಲಿ ಇದೇ ರೀತಿ ಬ್ರಿಟೀಷರು ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು ಎಂದು ಹೇಳಬಹುದು.

ಬ್ರಿಟೀಷರ ಹುನ್ನಾರ ಇಷ್ಟಕ್ಕೇ ಮುಗಿಯುವುದುಲ್ಲ. ವಾಜಿದ್ ಅಲಿ ಖಾನನಿಂದ ರಾಜ್ಯದ ಅಧಿಕಾರ ಕಸಿದುಕೊಂಡು ಅವನನ್ನು ಸ್ವತಂತ್ರವಾಗಿ ಬಿಟ್ಟು ಬಿಟ್ಟರೆ ಹೊರಗಡೆ ತಮ್ಮ ವಿರುದ್ಧ ಹಲವಾರು ಸಂಚುಗಳನ್ನು ರೂಪಿಸ ಬಹುದೆಂದು ಮತ್ತು ತಮ್ಮ ನಾಯಕನ ಬಂಧನದಿಂದ ರೊಚ್ಚಿಗೆದ್ದ ಪ್ರಜೆಗಳು ಯಾವಕ್ರಮ ತೆಗೆದುಕೊಳ್ಳಬಹುದೆಂದು ಊಹಿಸಿ ಅವನನ್ನು ಖೈದುಗೊಳಿಸುವ ನಿರ್ಧಾರ ಮಾಡುತ್ತಾರೆ.

> "ಸುಲ್ತಾನರು ನನ್ನನ್ನು ಕ್ಷಮಿಸಬೇಕು. ಈಗ ನಾನು ನಿಮ್ಮನ್ನು ಖೈದು
> ಮಾಡಬೇಕಾಗಿದೆ. ಶಾಂತಿ ಪಾಲನೆಯ ದೃಷ್ಟಿಯಿಂದ ಹಾಗೂ ತಮ್ಮ
> ಜೀವಕ್ಕೆ ಅಪಾಯ ಒದಗೀತು ಎನ್ನುವ ಕಾರಣಕ್ಕಾಗಿ ತಮ್ಮನ್ನ
> ಗೃಹಬಂಧನದಲ್ಲಿಡುವುದೇ ಮೇಲು ಎಂದು ನಮ್ಮ ಸರ್ಕಾರ
> ಅಭಿಪ್ರಾಯ ಪಡುತ್ತದೆ."[೧೪]

ಎಂದು ಬ್ರಿಟೀಷ್ ರೆಸಿಡೆಂಟ್ ಸಂಪೂರ್ಣವಾಗಿ ಲಖನೌ ಪಟ್ಟಣದ ಮೇಲೆ ಅಧಿಪತ್ಯವನ್ನು ಸ್ಥಾಪಿಸಿಕೊಳ್ಳುತ್ತಾನೆ. ಇದಕ್ಕೆ ಯಾವುದೇ ರೀತಿಯ ಪ್ರತಿಭಟನೆ ಎದುರಾಗದೇ ಇರುವಂತೆ ಎಚ್ಚರಿಕೆಯನ್ನು ವಹಿಸುತ್ತಾನೆ. ಇದು ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವದ ಬುದ್ಧಿವಂತಿಕೆ ಎಂದೇ ಹೇಳಬಹುದು.

ಹೀಗೆ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವ ಲಖನೌ ಪಟ್ಟಣದ ಮೇಲೆ ದಾಳಿ ನಡೆಸುತ್ತಿದ್ದರೂ ಮೀರ್ ಮತ್ತು ಮಿರ್ಜಾ ತಮಗೂ ಇದಕ್ಕೂ ಯಾವುದೇ ಸಂಬಂಧ ಇಲ್ಲ ಎಂಬಂತೆ ಪಾಳು ಮಸೀದಿಯ ಬಳಿ ಚದುರಂಗದ ಆಟದಲ್ಲಿ ಮುಳುಗಿರುವುದನ್ನು ಇಲ್ಲಿ ಬಹಳ ವ್ಯಂಗ್ಯವಾಗಿ ಚಿತ್ರಿಸಲಾಗಿದೆ.

> "ಇಡೀ ಲಖನೌ ಪಟ್ಟಣ ಗೊಂದಲದಲ್ಲಿ ಬಿದ್ದಿರುವಾಗ ಇವರು
> ಥಣ್ಣಗೆ ಕೂತು ಆಟ ಆಡ್ತಿದ್ದಾರೆ."[೧೫]

ಎಂದು ಒಬ್ಬ ದಾರಿಹೋಕ ಗಂಡಸು ಕೂಡ ಚದುರಂಗದ ಆಡಗಾರರನ್ನು ಗೇಲಿ ಮಾಡುವುದಲ್ಲದೆ ಅದರಿಂದ ಉಪಾಯವಾಗಿ ಹಣ ಕಸಿದುಕೊಳ್ಳುತ್ತಾನೆ. ಆಟಗಾರರು ತಮ್ಮ ಏಕಾಂತಕ್ಕೆ ಭಂಗ ಬರಬಾರದು ಎಂದು ಅವನು ಕೇಳಿದ ಹಣವನ್ನವನಿಗೆ ಕೊಟ್ಟು ಕಳಹಿಸುತ್ತಾರೆ.

ಈ ಚದುರಂಗದ ಆಟಗಾರರಿಗೆ ರಾಜ್ಯದ ರಾಜಕೀಯ ವ್ಯವಹಾರ ಎಂಬುದು 'ತಲೆ ಭಾರ' ಎಂಬಂತೆ ಆಗಿಹೋಗಿದೆ. ಈ ತಲೆ ಮೇಲಿನ ಭಾರವನ್ನು ವಾಜಿದ್ ಅಲಿ ಖಾನ್ ಹೊತ್ತುಕೊಂಡು ತಿರುಗುವುದರಿಂದ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವಕ್ಕೆ ಒಪ್ಪಿಸಿಬಿಡಬೇಕು ಎಂದು ಆಲೋಚಿಸುತ್ತಾರೆ.

> "ಈ ಕೆಂಪು ಮೂತಿಯವರ ಹತ್ತಿರ ಬಡಿದಾಡಿ ಗೆಲ್ಲೋಗು
> ಉಂಟಾ; ವ್ಯಥಾ ಶ್ರಮ. ಅವು ತಮ್ಮ ದೇಶದಲ್ಲಿ ಸುಖವಾಗಿ
> ತಿಂದು ಉಂಡು ಮಜವಾಗಿರೋದು ಬಿಟ್ಟು, ನಾಲ್ಕು ಸಾವಿರ
> ಮೈಲಿ ದೂರ ಬಂದು ನಮ್ಮ ದೇಶ ಆಳಿಕೊಡ್ತೀವಿ ಅಂತಾರಲ್ಲ.
> ಏನನ್ನ ಬೇಕು?"
> "ನನ್ನನ್ನ ಕೇಳಿದರೆ 'ತಲೆ ಭಾರ ಕಟ್ಟಿಕೊಳ್ಳೋದಕ್ಕೆ ಅಷ್ಟೊಂದು
> ತೆವಲು ಇದ್ದರೆ ದಾರಳವಾಗಿ ಬನ್ನಿ ಸ್ವಾಮಿ. ನನಗಂತೂ ತೊಂದರೆ
> ಕೊಡಬೇಡಿ ಅಷ್ಟೇ' ಅಂತ ಅವರಿಗೆ ರಾಜ್ಯ ಆಳೋಕೆ ಬಿಟ್ಟು ಬಿಡೋದು
> ಏನಂತೀರಿ?"[೧೬]

ಎಂದು ಮಿರ್ಜಾ ಎಲ್ಲವೂ ಪರಿತ್ಯಾಗ ಮಾಡಿ ತನ್ನ ನೆಮ್ಮದಿಯಾದ ಜೀವನದ ಬಗೆಗೇ ಯೋಚಿಸುತ್ತಾನೆ. ಅವನ ವಿಲಾಸಗಳಿಗೆ ಯಾವುದೇ ರೀತಿಯ ತೊಂದರೆ ಬರದಂತೆ ನೋಡಿಕೊಳ್ಳುತ್ತಾನೆ. ಸುಲ್ತಾನ್ ವಾಜಿದ್ ಅಲಿ ಖಾನನಿಗೂ ತನ್ನ ವಿಲಾಸೀ ಜೀವನದ ನಡುವೆ ರಾಜ್ಯ ರಾಜಕಾರಣ ಎಂಬುದು ತಲೆ ನೋವಾಗಿ ಪರಿಣಮಿಸುತ್ತದೆ. ಹಾಗಾಗಿಯೇ ಅವನು ಯಾವುದೇ ಪ್ರತಿಭಟನೆ ಇಲ್ಲದೇ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವಕ್ಕೆ ತನ್ನ ರಾಜ್ಯವನ್ನು ಸುಲಭವಾಗಿ ಬಿಟ್ಟುಕೊಡುತ್ತಾನೆ. ಹತ್ತೊಂಬತ್ತನೇ ಶತಮಾನದ ಬಹುಪಾಲು ರಾಜವಂಶಗಳ ಸ್ಥಿತಿ ಹೀಗೆ ಇದ್ದುದರಿಂದಲೇ ಬ್ರಿಟೀಷ್ ವಸಾಹತುಶಾಹಿ ಇಡೀ ಭಾರತದ ಮೇಲೆ ತಮ್ಮ ಅಧಿಪತ್ಯ ಸ್ಥಾಪಿಸಿಕೊಳ್ಳಲು ಸುಲಭವಾಯಿತು.

'ಅತಿಯಾದರೆ ಅಮೃತವೂ ವಿಷವಾಗುತ್ತದೆ' ಎಂಬ ಗಾದೆ ಕೇಳಿರಬಹುದು. ಜೀವನದಲ್ಲಿ ಪ್ರತಿಯೊಂದೂ ಹಿತ-ಮಿತವಾಗಿದ್ದರೆ ಚೆನ್ನ. ಆದರೆ ಸಂಪೂರ್ಣವಾಗಿ ಚದುರಂಗದ ಆಟದಲ್ಲಿ ಮುಳುಗಿದ್ದ ಮೀರ್ ಮತ್ತು ಮಿರ್ಜಾ ನಾಟಕದ ಕೊನೆಯಲ್ಲಿ ಸಣ್ಣ ವಿಷಯಕ್ಕಾಗಿ ಕಾದಾಡಿ ಒಬ್ಬರನ್ನೊಬ್ಬರು ತಿವಿದುಕೊಂಡು ಸಾವನ್ನಪ್ಪುತ್ತಾರೆ. ತನ್ನ ವೈಭವೋಪೇತ ಜೀವನದಲ್ಲಿ ಮೈಮರೆತು ಬ್ರಿಟೀಷರ ಕೈಗೆ ರಾಜ್ಯ

ರಾಜಕಾರಣವನ್ನು ಒಪ್ಪಿಸಿ ಅವರಿಗೆ ಸೆರೆಯಾದ ವಾಜಿದ್ ಅಲಿ ಖಾನನ ಮಾನಸಿಕವಾದ ಸಾವನ್ನು ಪ್ರಸನ್ನ ಆಟಗಾರರ ಮೂಲಕ ಬಹಳ ಅದ್ಭುತವಾಗಿ ಸಮೀಕರಿಸಿದ್ದಾರೆ.

ವಾಜಿದ್ ಅಲಿ ಖಾನ್ ಲಖನೌ ಪಟ್ಟಣವನ್ನು ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವಕ್ಕೆ ಯಾವ ಪ್ರತಿಭಟನೆ ಇಲ್ಲದೇ ಒಪ್ಪಿಸಿದ್ದು ಅವನ ಸುಖಲೋಲುಪತೆ ಒಂದು ಕಡೆಯಾದರೆ ಬ್ರಿಟೀಷರ ಸಾಮರ್ಥ್ಯದ ಎದುರು ನಿಲ್ಲಲಸಾಧ್ಯವಾಗಿ ಕೈಬಿಟ್ಟದ್ದು ಮತ್ತೊಂದು ಕಾರಣ. ಜೊತೆಗೆ ಹಾಗೇನಾದರೂ ಪ್ರತಿಭಟಿಸಿದ್ದೇ ಆದರೆ ನಷ್ಟ ಅನುಭವಿಸುತ್ತಿದ್ದವರು ಬ್ರಿಟೀಷರಲ್ಲ, ಬದಲಿಗೆ ಭಾರತೀಯ ಸಿಪಾಯಿಗಳೇ ಎಂಬ ಅಳಲೂ ಅವನಲ್ಲಿದೆ.

"ನಾನು ಒಂದು ಗುಂಡೂ ಹಾರಿಸದೇ ರಾಜ್ಯ ಒಪ್ಪಸಿದೆ ನಿಜ.
ಆದರೆ ಗುಂಡು ಹಾರಿಸಿದ್ದರೂ ಅದರಿಂದಾಗುತ್ತಿದ್ದ
ಉಪಯೋಗವೇನು? ಎರಡೂ ಕಡೆಯಲ್ಲಿರುವ ಭಾರತೀಯ
ಸಿಪಾಯಯಿಗಳಲ್ಲಿ ಕೆಲವರು ಸಾಯುತ್ತಿದ್ದರು ಅಷ್ಟೇ."[೧೭]

ಈ ಹಿಂದೆ ಹೇಳಿದಂತೆ ವಸಾಹತುಶಾಹಿಗಳೊಡನೆ ಗುರುತಿಸಿಕೊಂಡಿದ್ದ ದೇಶೀಯ ರಾಜರು ಜನರನ್ನು, ಸಾಮಾನು-ಸರಂಜಾಮುಗಳನ್ನು ಒದಗಿಸುತ್ತಿದ್ದರಿಂದ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವ ಬಲಿಷ್ಠವಾಗಿ ಬೆಳೆದಿತ್ತು. ಸ್ಥಳೀಯ ರಾಜ ಪರಂಪರೆಗಳು ಅವರ ಮೇಲೆ ಹರಿಹಾಯ್ದರೂ ನಷ್ಟ ಅನುಭವಿಸುತ್ತಿದ್ದದ್ದು ಸ್ಥಳೀಯ ಸೈನಿಕರೇ. ಇದು ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವದ ಚತುರ ನೀತಿ ಎಂದೇ ಹೇಳಬಹುದು.

ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವ ನಮ್ಮ ದೇಶದ ನೆಲ, ಜಲ, ಭಾಷೆ ಎಲ್ಲವನ್ನೂ ತಿಳಿಯಿತು. ಡಿ.ಆರ್.ನಾಗರಾಜ್ ಹೇಳಿದಂತೆ ಇಲ್ಲಿನ ಬಹುಮುಖೀ ಆಯ್ಕೆಗಳನ್ನು ಇಲ್ಲವಾಗಿಸಿ ಏಖಮುಖಿ ಆಯ್ಕೆಯ ಅನಿವಾರ್ಯತೆಯನ್ನು ಸೃಷ್ಟಿಸಿತು. ಆದರೆ ಅದು ದೇಶೀಯರ ಗುಲಾಮಗಿರಿಯಲ್ಲಿ ಎಂಬುದು ವಿಪರ್ಯಾಸದ ಸಂಗತಿ. ಇದನ್ನ ವಾಜಿದ್ ಅಲಿ ಖಾನ್ ಬಹಳ ಸ್ಪಷ್ಟವಾಗಿ ತಿಳಿಸುತ್ತಾನೆ.

"ನೀವು ಚೂರು ಚೂರಾಗಿದ್ದ ಈ ದೇಶವನ್ನು ಒಂದುಗೂಡಿಸಿದ್ದೀರಿ.
ಆದರೆ ನಮಗೆ ಏಕತೆ ಬಂದಿರುವುದು ನಮ್ಮ ನಮ್ಮ ಗುಲಾಮಗಿರಿಯಲ್ಲಿ
ಎನ್ನುವುದು ನಮ್ಮ ದುರ್ದೈವ."[೧೭]

ಅಂದರೆ ನಮ್ಮ ಇಡೀ ದೇಶ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವದಿಂದ ಅನುಕೂಲ ಮತ್ತು ಅನಾನುಕೂಲಗಳೆರಡನ್ನೂ ಅನುಭವಿಸಿತು ಎಂದು ಈ ಹಂತದಲ್ಲಿ ಹೇಳಬಹುದು.

ಒಟ್ಟಿನಲ್ಲಿ ಬ್ರಿಟೀಷ್ ವಸಾಹತುಶಾಹಿ ಪ್ರಭುತ್ವ ಹಂತ ಹಂತವಾಗಿ ತನ್ನ ಚತುರತೆ, ಚಾಣಾಕ್ಷತನ ಮತ್ತು ಹಿಂಸಾಮಾರ್ಗಗಳಿಂದ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಪ್ರಾಬಲ್ಯ ಸ್ಥಾಪಿಸಿತು ಎಂದು ಹೇಳಬಹುದು.

**ಕೊನೆ ಟಿಪ್ಪಣಿ :**

೧.ದಕ್ಷಿಣ ಭಾರತದ:(ವಸಾಹತುಶಾಹಿ, ರಾಷ್ಟ್ರೀತತೆ ಮತ್ತು ಸಂಘರ್ಷ): ಡಾ.ಎಸ್.ಚಂದ್ರಶೇಖರ್ : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪುಟ – ೬

೨. ಅದೇ, ಪುಟ – ೯
೩. ರಾಜಕೀಯ ಚಿಂತಕರು, ವಿದ್ಯಮಾನಗಳು ಮತ್ತು ವಿಧಾನಗಳು : ಎಮ್.ಎನ್.ಸುರೇಶ್ ಕುಮಾರ್, ಜಿ.ಆರ್.ಪೂರ್ಣಿಮಾ : ೨೦೦೫ : ಪುಟ – ೨

೪. ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ, ೨೦೦೧ – ಪುಟ – ೧೭೭

೫. ಅದೇ ಪುಟ – ೧೭೮

೬. ಅದೇ ಪುಟ – ೧೭೯

೭. ಅದೇ ಪುಟ – ೧೬೪

೮. ಅದೇ ಪುಟ – ೧೬೬

೯. ಅದೇ ಪುಟ – ೧೬೭

೧೦.ಅದೇ ಪುಟ – ೧೭೪

೧೧. ಅದೇ ಪುಟ – ೧೮೭

೧೨. ಅದೇ ಪುಟ – ೧೮೦

೧೩. ಅದೇ ಪುಟ – ೧೮೨

೧೪. ಅದೇ ಪುಟ – ೨೦೪, ೧೦೫

೧೫. ಅದೇ ಪುಟ – ೧೭೮

೧೬. ಅದೇ ಪುಟ – ೨೦೩

೧೭. ಅದೇ ಪುಟ – ೨೦೬

# ಅಧ್ಯಾಯ – ೪

## ಪರಂಪರೆ ಮತ್ತು ಆಧುನಿಕತೆಗಳ ತಾಕಲಾಟ

'ಪರಂಪರೆ ಮತ್ತು ಆಧುನಿಕತೆ' ಎಂಬ ಪರಿಕಲ್ಪನೆಗಳು ವಸಾಹತೋತ್ತರ ಸಂದರ್ಭದಲ್ಲಿ ರೂಪುಗೊಂಡ ಹೊಸ ಅಧ್ಯಯನ ಶಿಸ್ತುಗಳಲ್ಲೊಂದು. ವಸಾಹತೋತ್ತರ ಸಂದರ್ಭದಲ್ಲಿ ಮನಃಶಾಸ್ತ್ರ, ರಾಜಕೀಯಶಾಸ್ತ್ರ, ಸಮಾಜಶಾಸ್ತ್ರಗಳಂಥ ಹಲವಾರು ಮಾನವಿಕ ವಿಜ್ಞಾನಗಳು ಕೂಡ ಈ ಎರಡೂ ಪರಿಕಲ್ಪನೆಗಳ ಮೂಲಕವೇ ತನ್ನ ಹಲವಾರು ಸಿದ್ಧಾಂತಗಳನ್ನು ವ್ಯಾಖ್ಯಾನಿಸಲೆತ್ನಿಸುತ್ತವೆ. ವ್ಯಕ್ತಿ, ಸಂಸ್ಕೃತಿ ಹಾಗೂ ಸಮಾಜಗಳ ವರ್ತನೆಗಳನ್ನೂ ಸಹ ಈ ಎರಡೂ ಪರಿಕಲ್ಪನೆಗಳ ಮೂಲಕವೇ ವ್ಯಾಖ್ಯಾನಿಸುತ್ತಾ ಬರಲಾಗಿದೆ.

ಈ ಪರಂಪರೆಯ ಪರಿಕಲ್ಪನೆಯ ಬಗ್ಗೆ ನಟರಾಜ್ ಹುಳಿಯಾರ್ ಅವರ ವ್ಯಾಖ್ಯಾನ ಹೀಗಿದೆ :

"ಒಂದು ಸಮುದಾಯದ ಪರಂಪರೆ ರೂಪುಗೊಳ್ಳುವುದೇ ಭೂತದಿಂದ ವರ್ತಮಾನಕ್ಕೆ ಹರಿದು ಬಂದ ನಂಬಿಕೆಗಳು, ಸಂಕೇತಗಳು, ಪ್ರತಿಮೆಗಳು, ಆಚರಣೆಗಳು, ಲೋಕದರ್ಶನ ಹಾಗೂ ಸಂಸ್ಥೆಗಳ ಮೂಲಕ. ಈ ದೃಷ್ಟಿಯಿಂದ ಪರಂಪರೆಯೆಂದರೆ ಒಂದು ಸಮುದಾಯದ ಭೂತದ ಮುಂದುವರಿಕೆ."[೧] ಅಂದರೆ ನಮ್ಮ ಪೂರ್ವಜರ ಕಾಲದಿಂದ ಇಲ್ಲಿಯವರೆಗೆ ಹರಿದು ಬಂದಿರುವ ನಂಬಿಕೆ, ಆಚರಣೆ, ಸಂಕೇತ, ಪ್ರತಿಮೆಗಳನ್ನು ಪರಂಪರೆ ಎಂದು ಕರೆಯಲಾಗಿದೆ.

'ಪರಂಪರೆ' ಎಂಬುದು ಇಂಗ್ಲೀಷ್‌ನ 'ಟ್ರೆಡಿಷನ್' ಎಂಬ ಪದದಿಂದ ಬಂದಿದೆ. ಟ್ರೆಡಿಷನ್ ಎಂದರೆ "ಹಿರೀಕರಿಂದ ಬಳುವಳಿಯಾಗಿ ಬಂದದ್ದು" ಎಂದು ರೇಮಂಡ್ ವಿಲಿಯಮ್ಸ್ ಗುರುತಿಸುತ್ತಾರೆ. 'ಟ್ರೆಡಿಷನ್' ಮತ್ತು 'ಟ್ರೆಡಿಷನಲಿಸಂ' ಎಂಬ ಪರಿಕಲ್ಪನೆಗಳನ್ನು ಆಧುನಿಕ ಸಂದರ್ಭದಲ್ಲಿ ಎಲ್ಲಾ ಹೊಸತಿನ ವಿರೋಧಿ ಅಂಶಗಳನ್ನು ಗುರುತಿಸಲು ರೇಮಂಡ್ ಬಳಸುತ್ತಾರೆ. ಅಂದರೆ ಯಾವಾಗ ಹೊಸ ಮೌಲ್ಯಗಳು ಸಮುದಾಯವನ್ನು ಪ್ರವೇಶಿಸಿತೋ ಆ ಸಂದರ್ಭದಲ್ಲಿ ಹಿಂದಿನಿಂದ ಆಚರಣೆಯಲ್ಲಿ ಇದ್ದಂತಹ ಮೌಲ್ಯಗಳನ್ನು 'ಟ್ರೆಡಿಷನ್' ಎಂದು ಗುರುತಿಸಲಾಯಿತು. ಅಲ್ಲಿಯವರೆಗೂ ಈ ಪರಂಪರೆಯ ಮತ್ತು ಆಧುನಿಕತೆ ಎಂಬ ಭಿನ್ನ ಭಿನ್ನವಾದ ಪರಿಕಲ್ಪನೆಗಳು ಅಸ್ತಿತ್ವದಲ್ಲಿ ಇರಲಿಲ್ಲ ಎಂದು ರೇಮೆಂಡ್ ಹೇಳುತ್ತಾನೆ.[೨] ಈ ರೀತಿಯ ಭಿನ್ನತೆ ರೂಪುಗೊಳ್ಳುವುದೂ ಸಹ ಈವರೆಗೆ ಇದ್ದಂತಹ ಮೌಲ್ಯಗಳಿಗೆ, ಮೂಲಭೂತ

ಅಸ್ತಿತ್ವಗಳಿಗೆ ದಕ್ಕೆ ಬಂದಾಗ ಎಂದು ವಾದಿಸುತ್ತಾನೆ. ಕಾಲದಿಂದ ಕಾಲಕ್ಕೆ ಪುನರ್‌ರಚನೆ ಮತ್ತು ನಿರ್ರಚನೆಗೆಗಳಿಗೆ ಒಳಗಾಗುತ್ತಲೇ ಮುನ್ನಡೆಯುವ ಪರಂಪರೆಯ ಅಧಿಕಾರ ಕೇಂದ್ರಗಳಿಗೆ ಆಧುನಿಕತೆಯು ಮುಖಾಮುಖಿಯಾಗುತ್ತಾ ಬಹುದೊಡ್ಡ ಸವಾಲು ಹಾಗೂ ಬಿಕ್ಕಟ್ಟುಗಳನ್ನು ಸೃಷ್ಟಿಸುತ್ತಾ ಬಂದಿದೆ. ಅಂದರೆ ಪರಂಪರಾಗತವಾಗಿ ಬಂದಂತಹ ಹಲವಾರು ಮೌಲ್ಯಗಳಿಗೆ, ನಂಬಿಕೆಗಳಿಗೆ ಪರ್ಯಾಯವಾಗಿ ಹೊಸದೊಂದು ಮೌಲ್ಯ ಸೃಷ್ಟಿಯಾಗುವುದನ್ನು ಆಧುನಿಕ ಘಟ್ಟದಲ್ಲಿ ಗುರುತಿಸಬಹುದಾಗಿದೆ. ಹೀಗೆ ಪರ್ಯಾಯವಾಗಿ ಸೃಷ್ಟಿಯಾಗುವಂತಹ ಆಧುನಿಕತೆ ಸಮುದಾಯದ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದುಕನ್ನು ಪಲ್ಲಟಗೊಳಿಸಲೆತ್ನಿಸುತ್ತದೆ. ಹೀಗೆ ಆಧುನಿಕತೆ ತರುವ ಬದಲಾವಣೆಗಳಿಗೆ ಅಥವ ಪಲ್ಲಟಗಳಿಗೆ ಪಾರಂಪರಿಕ ರಕ್ಷಣೆಯುಳ್ಳ ಸಮುದಾಯ ಪ್ರಾರಂಭದಲ್ಲಿ ತೀವ್ರವಾದ ಪ್ರತಿರೋಧವನ್ನು ಒಡ್ಡುತ್ತಾ ಬಂದಿವೆ. ಆದರೆ ಕಾಲಕ್ರಮೇಣ ಆಧುನಿಕತೆ ಎತ್ತುವ ನ್ಯಾಯಯುತ ಪ್ರಶ್ನೆಗಳು ಮತ್ತು ತನ್ನ ಪಾರಂಪರಿಕ ಸಮುದಾಯದಲ್ಲಿ ಇರುವಂತಹ ಹಲವಾರು ಹಿಂಸಾ ಮಾರ್ಗಗಳು ಮತ್ತು ಆಚರಣೆಗಳು ಸಮುದಾಯನ್ನು ಆತ್ಮವಿಶ್ವಾಸದಿಂದಲೇ ಹೊಸ ಅನುಭವವನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ.[೩]

ಆದರೆ ಪಾರಂಪರಿಕ ನೆಲೆಗಳ ಬದಲಾವಣೆಗೆ ಆಧುನಿಕತೆ ಬಳಸುವ ಹಿಂಸಾಮಾರ್ಗ, ಚಾಣಾಕ್ಷತನ, ಕುಟಿಲನೀತಿ, ಆಕ್ರಮಣಶೀಲತೆ, ಹಿಂಸೆಯ ಪ್ರತಿಮೆಗಳು ಮಾತ್ರ ಸಹಿಸಲಸಾಧ್ಯವಾದವುಗಳು. ಪರಂಪರೆ ಮತ್ತು ಆಧುನಿಕತೆಗಳ ನಡುವಿನ ಸಾತತ್ಯ, ವಿಚ್ಛಿನ್ನತೆ, ಸಂಘರ್ಷ ಹಾಗೂ ಅನುಸಂಧಾನ ಮತ್ತು ಪುನರ್ ಮೌಲ್ಯೀಕರಣಗಳ ಪ್ರಕ್ರಿಯೆಯನ್ನು ಆಧುನಿಕ ಕನ್ನಡ ಸಾಹಿತ್ಯ ಮತ್ತು ವಿಮರ್ಶಾ ಪರಂಪರೆ ಗುರುತಿಸುತ್ತಾ ಬಂದಿದೆ. ಅಲ್ಲದೆ ಆಧುನಿಕ ಕನ್ನಡ ನಾಟಕ ಪರಂಪರೆಯಲ್ಲೂ ಈ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. ಸಂಸ, ಕುವೆಂಪು, ಮಾಸ್ತಿ, ಪು.ತಿ.ನ, ಕಂಬಾರ, ಲಂಕೇಶ್, ಪ್ರಸನ್ನ ಮೊದಲಾದ ಮುಖ್ಯ ನಾಟಕಾರರು ಈ ವಿಷಯವನ್ನ ಪರಿಶೋಧಿಸುವ ಪ್ರಯತ್ನ ಮಾಡಿದ್ದಾರೆ.

ಪ್ರಸನ್ನ ಅವರ 'ಮಹಿಮಾಪುರ', 'ಜಂಗಮದ ಬದುಕು' 'ಉಲಿ' ಮೊದಲಾದ ನಾಟಕಗಳು ಆಧುನಿಕತೆ ತಂದೊಡ್ಡುವ ಚಾಣಾಕ್ಷತನ, ಕುಟಿಲನೀತಿ, ಆಕ್ರಮಣಶೀಲತೆಗಳನ್ನು ಹಲವು ಆಯಾಮಗಳಲ್ಲಿ ಪರಿಶೀಲಿಸಲೆತ್ನಿಸುತ್ತವೆ. ಆಧುನಿಕ ಪೂರ್ವಯುಗದಲ್ಲಿ ಒಂದು ಪ್ರಬಲವರ್ಗ ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಮತ್ತು ಉಳಿಸಿಕೊಳ್ಳಲು ತನಗಿಂತ ಮೊದಲಿದ್ದ ಪ್ರಬಲವರ್ಗವನ್ನು ಬಲಪ್ರಯೋಗದ ಮೂಲಕ ಮಣಿಸುವ ಕಾರ್ಯ ಮಾಡುತ್ತಿತ್ತು. ಆದರೆ ಆಧುನಿಕೋತ್ತರ ಸಂದರ್ಭದಲ್ಲಿ ಸ್ಥಳೀಯ ಪ್ರಬಲ ವರ್ಗವನ್ನು ಮಣಿಸುವುದಕ್ಕಿಂತ ಅಲ್ಲಿನ ಜನ ಸಮುದಾಯವನ್ನು ತನ್ನ ಗುಣ, ವಿಚಾರವಾದ, ಮೌಲ್ಯ, ತರ್ಕಬದ್ಧತೆ, ಶಿಸ್ತು,

ಸಂಯಮ ಮುಂತಾದವುಗಳ ಮೂಲಕ ಆಕರ್ಷಣೆಗೊಳಪಡಿಸಿ ಅವರ ಮೇಲೆ ಅಧಿಕಾರ ಸಾಧಿಸಿಬಿಟ್ಟರೆ ಇಡೀ ವ್ಯವಸ್ಥೆಯ ಮೇಲೆ ಅಧಿಕಾರ ಸ್ಥಾಪಿಸುವುದು ಸುಲಭವಾಗಿ ಬಿಡುತ್ತದೆ. ಇದೇ ಸಂಚಿನ ರಾಜಕಾರಣವನ್ನು ವಸಾಹತುಶಾಹಿ ಪೌರ್ವಾತ್ಯ ದೇಶಗಳ ಮೇಲೆ ಅಸ್ತಿತ್ವ ಸ್ಥಾಪಿಸಲು ಬಳಸಿಕೊಂಡದ್ದು ಎಂದು ಎಡ್ವರ್ಡ್‌ಸೈದ್ ತಿಳಿಸುತ್ತಾನೆ.

'ಮಹಿಮಾಪುರ' ನಾಟಕದಲ್ಲಿ ರಾಮಾಚಾರಿಯಂಥ ಪ್ರಬಲ ಪುರೋಹಿತಾಶಾಹಿಯು ತನ್ನ ಅಸ್ತಿತ್ವ ಸ್ಥಾಪಿಸಿಕೊಳ್ಳಲು ಅಲ್ಲಿನ ಪ್ರಬಲವರ್ಗಕ್ಕೆ ಸೇರಿದ್ದ ಮೊಖ್ತೇಸರನನ್ನು ಹಾಗೂ ಇಡೀ ಗ್ರಾಮದ ಮುಖ್ಯಸ್ಥರನ್ನೆಲ್ಲಾ ಕರೆದು ತನ್ನ ಮೇಲೆ ಹಲವು ಧನಾತ್ಮಕ ಮೌಲ್ಯಗಳನ್ನು ಆರೋಪಿಸಿಕೊಂಡು ಅವರನೆಲ್ಲಾ ನಂಬಿಸುವ ಪ್ರಯತ್ನ ಮಾಡುತ್ತಾನೆ. ಆ ಮೂಲಕ ಇಡೀ ಮಹಿಮಾಪುರವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ಹುನ್ನಾರ ಅವನದ್ದು. ಪರಂಪರೆಯ ಜಡತೆ, ಯಾಂತ್ರಿಕತೆಗಳಿಂದ ಬೇಸತ್ತಿದ್ದ ಮಹಿಮಾಪುರದ ಜನ ರಾಮಾಚಾರಿಯ ಆಗಮನವನ್ನು ಯಾವ ತರ್ಕಕ್ಕೂ ಒಳಪಡಿಸದೆ ಒಪ್ಪಿಕೊಂಡು ಬಿಡುತ್ತಾರೆ.

ಹೀಗೆ ವಸಾಹತುಶಾಹಿ ಸಂದರ್ಭದಲ್ಲಿ ಪಾರಂಪರಿಕ ಸಮುದಾಯದಲ್ಲಿ ಇದ್ದಂತಹ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ದೌರ್ಬಲ್ಯಗಳೇ ಹೊಸ ಅನುಭವಗಳು ಯಾವುದೇ ಪ್ರಬಲ ವಿರೋಧವಿಲ್ಲದೆ ಒಳ ನುಸುಳಲು ಅನುವು ಮಾಡಿಕೊಟ್ಟಿತು. ಜಡಗೊಂಡಂತಹ ಸಮುದಾಯಗಳಿಗೆ ಆಧುನಿಕತೆಯ ಇಂಥ ಪ್ರವೇಶವೂ ಕೂಡ ಒಂದು ರೀತಿಯ ಚಾಲನ ಶಕ್ತಿಯನ್ನು ನೀಡಬಲ್ಲದು. ಹಾಗಾಗಿಯೇ ಹದಿನೈದು ದಿನಗಳಿಂದ ಯಾವುದೇ ರೀತಿಯ ಪೂಜೆ, ನೈವೇದ್ಯಗಳಿಲ್ಲದೇ ಊರಿಗೆ ಊರೆ ಗರ ಬಡಿದಂತೆ ಇದ್ದಂತಹ ಮಹಿಮಾಪುರಕ್ಕೆ ರಾಮಾಚಾರಿಯ ಪ್ರವೇಶ ಚಾಲನ ಶಕ್ತಿಯನ್ನು ತಂದುಕೊಟ್ಟಂತಾಗುತ್ತದೆ. ಹಾಗಾಗಿಯೇ ಆ ಊರಿನ ಪ್ರಮುಖರೆಲ್ಲರು ರಾಮಾಚಾರಿಯ ಯಾವ ಮಾತುಗಳನ್ನು ತರ್ಕಕ್ಕೆ ಈಡುಮಾಡದೇ ಒಪ್ಪಿಕೊಳ್ಳುತ್ತಾರೆ. ಆದರೆ ಈ ರಾಮಾಚಾರಿಯ ಆಧುನಿಕ ಪ್ರಜ್ಞೆ ಆತನ ಸ್ವಾರ್ಥ ಸಾಧನೆಗೆ ಪುರೋಹಿತಶಾಹಿಯ ಶಕ್ತಿರಾಜಕಾರಣದ ಸ್ಥಾಪನೆಯ ಉದ್ದೇಶವೇ ಹೊರತು ಬೇರೇನು ಅಲ್ಲ ಎಂಬುದನ್ನು ನಾಟಕದಲ್ಲಿ ಕಾಣಬಹುದಾಗಿದೆ. ಪಾರಂಪರಿಕ ಮೌಲ್ಯಗಳು ಹಾಗೂ ಆಧುನಿಕ ಮನಸ್ಸುಗಳ ಸಂಬಂಧದ ಸ್ವರೂಪದ ಅನೇಕ ಮಾದರಿಗಳನ್ನು ಪುರೋಹಿತಶಾಹಿಯ ಆಂತರಿಕ ಮುಖವನ್ನು ವಿಶ್ಲೇಷಿಸಲು ಪ್ರಸನ್ನ ಇಲ್ಲಿ ಪ್ರಯತ್ನಿಸಿದ್ದಾರೆ. ಜೊತೆಗೆ ಆಧುನಿಕ ಸಂಧರ್ಭದಲ್ಲಿ ಭಾರತೀಯ ಸಮಾಜದಲ್ಲಿ ಉಂಟಾದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಹಾಗು ಜಾಗತಿಕ ಪಲ್ಲಟಗಳನ್ನು ತಮ್ಮ ನಾಟಕಗಳಲ್ಲಿ ಚರ್ಚಿಸಿದ್ದಾರೆ.

ಆಧುನಿಕ ಸಂದರ್ಭದಲ್ಲಿ ಹೊಸ ನೋಟ ಕ್ರಮಗಳು ಪರಂಪರೆಯ ಧರ್ಮಾಂಧತೆ, ಅರಾಜಕತೆ, ಜಾತೀಯತೆ, ಮೂಡನಂಬಿಕೆಗಳನ್ನು ತೊಡೆದು ಹಾಕಲೆಂದು ಹೊರಟವುಗಳು. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಆಧುನಿಕತೆ ಧಾರ್ಮಿಕ ಪರಂಪರೆಯನೇ ತನ್ನ ಅಭಿವೃದ್ಧಿಯ ಮೆಟ್ಟಿಲನ್ನಾಗಿ ಮಾಡಿಕೊಂಡಿತು. ಇದನ್ನೆ ಪ್ರಸನ್ನ ಅವರು ತಮ್ಮ 'ದೇಸಿ ಜೀವನ ಪದ್ಧತಿ' ಎಂಬ ಪುಸ್ತಕದಲ್ಲಿ "ಆಧುನಿಕ ಯುಗವು ಧಾರ್ಮಿಕ ಶೋಷಣೆ, ಜಾತೀಯತೆ ಹಾಗೂ ಮೂಡನಂಬಿಕೆಗಳನ್ನು ನಿರ್ಮೂಲನ ಮಾಡುತ್ತೇನೆ ಎಂದು ಹೊರಟಿತು. ಆದರೆ ಕಡೆಗೆ ಆದದ್ದೇ ಬೇರೆ. ಆಧುನಿಕ ಯುಗವು ಧಾರ್ಮಿಕ ಶೋಷಣೆಯನ್ನು ನಿವಾರಿಸುವ ಬದಲಾಗಿ ಧರ್ಮ ಹಾಗೂ ನೈತಿಕತೆಗಳನ್ನೆ ನಿವಾರಿಸಿಬಿಟ್ಟಿತು. ಜಾತೀಯತೆಯನ್ನು ನಿರ್ಮೂಲನ ಮಾಡುವ ಬದಲಾಗಿ ಜಾತೀಯತೆಯ ಒಟ್ಟಿಗೆ ರಾಜಿ ಮಾಡಿಕೊಂಡಿತು. ಹಾಗಾಗಿ ಇಂದು ಜಾತೀಯತೆಯ ಹೊಸ ಹೊಸ ರೂಪಗಳನ್ನು ನಾವು ಕಾಣುವಂತಾಗಿದೆ. ಹಳೆಯ ಮೂಢನಂಬಿಕೆಗಳ ಜಾಗದಲ್ಲಿ ಹೊಸ ಮೂಢನಂಬಿಕೆಗಳು ಬೇರೂರಿವೆ."[೪] ಎಂದು ಆಧುನಿಕತೆಯ ಸಂಚಿನರಾಜಕಾರಣವನ್ನು ವಿವರಿಸುತ್ತಾರೆ. ಮಹಿಮಾಪುರ ನಾಟಕದಲ್ಲಿಯೂ ಆಧುನಿಕ ಯುಗದ ಸಕಲ ವಿದ್ಯೆಗಳನ್ನೂ ಕಲಿತಿದ್ದ ರಾಮಾಚಾರಿ ಮಹಿಮಾಪುರವನ್ನು ಪ್ರವೇಶಿಸಿ ಅಲ್ಲಿನ ಜನಸಮುದಾಯದ ಧರ್ಮಾಂಧತೆಯನ್ನು ಮೂಢನಂಬಿಕೆಯನ್ನು ಜಾತೀಯತೆಯನ್ನು ತೊಡೆದು ಹಾಕಬೇಕಾಗಿತ್ತು. ಆದರೆ ತನ್ನ ಸ್ವಾರ್ಥ ಸಾಧನೆಗಾಗಿ, ಅಧಿಕಾರ ಸ್ಥಾಪನೆಗಾಗಿ ಮತ್ತು ಆ ಮೂಲಕ ಹಣ ಸಂಪಾದನೆಗಾಗಿ ಧರ್ಮದ ಮೂಲವಾದ ಪೌರೋಹಿತ್ಯಕ್ಕೆ ಮೊರೆ ಹೋಗುತ್ತಾನೆ. ಜನರಲ್ಲಿ ಪುರೋಹಿತಶಾಹಿಯ ಬಗೆಗೆ ಇದ್ದ ನಂಬಿಕೆಗಳು ಇನ್ನಷ್ಟು ಆಳಕ್ಕೆ ಇಳಿಯುವಂತೆ ಮಾಡುತ್ತಾನೆ. ಆ ಮೂಲಕ ಅವರ ಮೇಲೆ ನಿಯಂತ್ರಣವನ್ನೂ ಸಾಧಿಸುವ ಹುನ್ನಾರವನ್ನು ನಡೆಸಿದ್ದಾನೆ, ಅದರಲ್ಲಿ ಯಶಸ್ವಿಯೂ ಆಗುತ್ತಾನೆ.

ಧರ್ಮಗಳು ನ್ಯಾಯ, ನೀತಿ, ಸತ್ಯ, ಅಹಿಂಸೆಗಳೆಂಬ ಮುಂತಾದ ಮೂಲ ಮಂತ್ರಗಳನ್ನು ಇಟ್ಟುಕೊಂಡು ಪ್ರಾರಂಭವಾದವುಗಳು. ಆ ಮೂಲಕ ಜನರ ಮನಸ್ಸಿನಲ್ಲಿ ತುಂಬಿರುವ ಸ್ವಾರ್ಥ, ಕ್ರೋಧ, ಅಹಂಕಾರ, ಮೋಸಗಳಂಥಹ ಮುಂತಾದ ದಮನಕಾರಿ ಅಂಶಗಳನ್ನು ತೊಡೆದು ಹಾಕಲು ಯತ್ನಿಸಿದಂತಹವುಗಳು. ಆದರೆ ಆಧುನಿಕ ಯುಗದಲ್ಲಿ ಧರ್ಮದ ಇಂತಹ ನೈತಿಕ ಪಥದಿಂದ ಬಿಡಿಸಿಕೊಂಡು ಬಹುದೂರ ಸಾಗಿರುವ ಹಲವು ಉದಾಹರಣೆಗಳಿವೆ. 'ಮಹಿಮಾಪುರ' ನಾಟಕದಲ್ಲಿನ ರಾಮಾಚಾರಿಯು ಆಧುನಿಕತೆಯ ಐಶಾರಾಮಿ ಜೀವನ ಪದ್ಧತಿಯ ದಾಳಿಗೆ ತುತ್ತಾಗಿ ಧರ್ಮದ ನೈತಿಕ ಮಾರ್ಗವನ್ನು ತೊರೆದು ಅನೈತಿಕ ಮಾರ್ಗವನ್ನು ಆಶ್ರಯಿಸಿದ. ಅಷ್ಟೆ ಅಲ್ಲದೆ ಮಹಿಮಾಪುರದಲ್ಲಿ ನಡೆಯುತ್ತಿದ್ದ ಮೋಸ, ಅರಾಜಕತೆಯ ಪಾಲುದಾರನೂ ಆಗಿದ್ದ. ಇದರಿಂದ ಅವನಿಗೆ ಹೇರಳವಾದ ಹಣ ಸಂಗ್ರಹಣೆಯಾಯಿತು. ಆ

ಮೂಲಕ ಅಲ್ಪ ಸಂಖ್ಯಾತನಾದ ಬ್ರಾಹ್ಮಣ ತನ್ನ ಬುದ್ಧಿಶಕ್ತಿಯಿಂದ ಇಡೀ ಬಹುಸಂಖ್ಯಾತ ಜನಸಮುದಾಯದ ಮೇಲೆ ತನ್ನ ಪ್ರಾಬಲ್ಯ ಸಾಧಿಸಿಕೊಂಡ. ಇದನ್ನೇ ಪ್ಯೂಕೋ ಹಾಗೂ ಸೈದ್ 'ಜ್ಞಾನಾಧಿಕಾರ ಹಾಗೂ ಬೌದ್ಧಿಕ ಪ್ರಭುತ್ವ' ಎಂದು ಕರೆದಿರುವುದು. ಆಧುನಿಕ ಯುಗದಲ್ಲಿ ರಾಮಾಚಾರಿಯಂತೆ ಧರ್ಮದ ಎಲ್ಲೆ ಮೀರಿ ತನ್ನ ಜ್ಞಾನ ಮತ್ತು ಅಧಿಕಾರಿಗಳಿಂದ ಪ್ರತ್ಯೇಕ ಅಸ್ತಿತ್ವವನ್ನು ರೂಪಿಸಿಕೊಂಡ ವಿದ್ಯಾಪತಿಯಂತ ಪಾತ್ರಚಿತ್ರಣವೂ ಪ್ರಸನ್ನ ಅವರ 'ಉಲಿ' ನಾಟಕದಲ್ಲಿ ಅದ್ಭುತವಾಗಿ ಚಿತ್ರಿತಗೊಂಡಿದೆ. ಇದನ್ನು ಮುಂದಿನ ಅಧ್ಯಾಯದಲ್ಲಿ ವಿಸ್ತಾರವಾಗಿ ಚರ್ಚಿಸಬಹುದಾಗಿದೆ.

ಪರಂಪರೆಯಲ್ಲಿದ್ದ ಅಸಮಾನ ಶ್ರೇಣೀಕೃತ ವ್ಯವಸ್ಥೆಯನ್ನು ಆಧುನಿಕ ಸಂದರ್ಭದಲ್ಲಿಯೂ ಧರ್ಮ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳಲು ಅಷ್ಟೇ ಭದ್ರವಾಗಿ ಕಾಪಾಡಿಕೊಂಡು ಬಂದಿರುವುದು ಸತ್ಯವಾದದ್ದು. ಪುರೋಹಿತಶಾಹಿ ವ್ಯವಸ್ಥೆ ಸಮಾಜದಲ್ಲಿ ತನ್ನ ಸ್ಥಾನ–ಮಾನಗಳನ್ನು ಕಾಯ್ದುಕೊಳ್ಳಲು ಜಾತಿ ವ್ಯವಸ್ಥೆಯನ್ನು ಜೀವಂತವಾಗಿಡುವ ಯೋಜನೆಯನ್ನು ಯಾವ ರೀತಿ ರೂಪಿಸುತ್ತಿರುತ್ತದೆ ಎಂಬುದಕ್ಕೆ ನಾಟಕದಲ್ಲಿ ಬರುವ ರಾಮಾಚಾರಿಯ ಪಾತ್ರ ಉತ್ತಮ ನಿದರ್ಶನವಾಗಿದೆ. ಈತ ಪರಂಪರೆಯ ಅಸಮಾನ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ನಿರ್ಮೂಲನ ಮಾಡುವ ಬದಲು ಅದರೊಟ್ಟಿಗೆ ರಾಜಿ ಮಾಡಿಕೊಳ್ಳುತ್ತಾನೆ. ಆ ಮೂಲಕ ಮುಗ್ಧ ಜನಗಳ ಮೇಲೂ ಪ್ರಾಬಲ್ಯ ಸ್ಥಾಪಿಸುತ್ತಾನೆ. ಪರಮನಂಥ ಮುಗ್ಧ ಚೇತನಗಳ ಅಸ್ಪೃಶ್ಯತೆಯನ್ನು ನಿವಾರಿಸುವ ಬದಲು ಅವನನ್ನೇ ನಿರ್ಮೂಲನ ಅಂದರೆ ಪರಮನನ್ನು ದೇವಾಲಯದಿಂದ ಹೊರ ಹಾಕುವ ಪ್ರಯತ್ನ ಮಾಡುತ್ತಾನೆ. ಮತ್ತೊಂದು ಹಂತದಲ್ಲಿ ಇಂಥ ನಿರ್ಮೂಲನ ಪ್ರವೃತ್ತಿ ಪುರೋಹಿತಶಾಹಿಯಲ್ಲಿದ್ದ ಭಯ, ಆತಂಕಗಳೂ ಕಾರಣವಾಗಿದ್ದವು ಎಂಬುದನ್ನು ನಾವಿಲ್ಲಿ ಮರೆಯಬಾರದು.

ಪರಂಪರೆಯ ಬೇರುಗಳು ಆಧುನಿಕ ಸಂದರ್ಭದಲ್ಲಿ ಶಾಶ್ವತವಾಗಿ ಉಳಿದುಬಿಟ್ಟರೆ ಒಂದಲ್ಲಾ ಒಂದು ದಿನ ತನ್ನನ್ನು ನುಂಗಿ ಬಿಡುತ್ತವೆ ಎಂಬ ಭಯ ಎಲ್ಲಾ ಆಧುನಿಕ ಪ್ರಬಲ ಶಕ್ತಿಗಳಲ್ಲಿ ಇದ್ದೇ ಇರುತ್ತದೆ. ಮುಗ್ಧತೆ ಪ್ರತಿಕವಾಗಿರುವ ಪರಮನಂಥ ದಲಿತನ ಬಗೆಗೆ ರಾಮಾಚಾರಿಗೆ ಭಯವಿತ್ತು. ಪರಮನಂಥ ಪ್ರಾಮಾಣಿಕರು ಶಾಶ್ವತವಾಗಿ ದೇವಸ್ಥಾನದಲ್ಲಿಯೇ ಉಳಿದು ಬಿಟ್ಟರೆ ತನ್ನ ಅಸ್ತಿತ್ವಕ್ಕೇ ದಕ್ಕೆಯುಂಟಾಗುತ್ತದೆ ಎಂಬ ಭಯ ರಾಮಾಚಾರಿಯಂಥ ಪುರೋಹಿತಶಾಹಿ ವ್ಯವಸ್ಥೆಯ ಆಳದಲ್ಲಿ ನೆಲೆಸಿರುತ್ತದೆ. ಈ ಕಾರಣವಾಗಿ ಪರಮನ ಅಸ್ತಿತ್ವವನ್ನು ಬುಡಸಮೇತ ಕಿತ್ತುಹಾಕಲು ಈ ಪುರೋಹಿತಶಾಹಿ ಹಲವು ಬಗೆಯ ಸಂಚುಗಳನ್ನು ನಡೆಸುತ್ತದೆ.

ಆಧುನಿಕ ಸಂದರ್ಭದಲ್ಲಿ ಪುರೋಹಿತಶಾಹಿ ವ್ಯವಸ್ಥೆಯ ಇಂಥ ನಿರ್ಮೂಲ ಪ್ರವೃತ್ತಿ ಮತ್ತು ಕುಟಿಲ ನೀತಿಗಳು ಪರಂಪರೆಯ ನೈತಿಕ ಬದುಕನ್ನು ಬಯಸುವ ಪರಮನ ಮುಗ್ಧ ಚೇತನಗಳಲ್ಲಿ ತೀವ್ರವಾದ ಕ್ರೋಧವನ್ನುಂಟುಮಾಡುತ್ತದೆ. ಆಧುನಿಕತೆಯ ಇಂಥ ವಿನಾಶಕಾರಿ ಪ್ರವೃತ್ತಿಯನ್ನು ಹೇಗಾದರೂ ಮಾಡಿ ತಡೆಯಲೇಬೇಕೆಂದು ಪರಿತಪಿಸುತ್ತವೆ. ಆದರೆ ಆಧುನಿಕ ಸಂದರ್ಭದಲ್ಲಿ ಪುರೋಹಿತಶಾಹಿಯ ಭೌದ್ಧಿಕ ಪ್ರಾಬಲ್ಯವನ್ನು ಎದುರಿಸಲಾರದೆ ಪರಮನಂಥ ದುರ್ಬಲರು ಹೇಗೆ ಸೋಲನ್ನನುಭವಿಸುತ್ತಾರೆ ಎಂಬುದನ್ನು ಈ ನಾಟಕ ಕ್ರಿಯಾತ್ಮಕವಾಗಿ ಹೇಳುತ್ತದೆ.

ಪುರೋಹಿತಶಾಹಿಯಂಥ ಅತ್ಯಂತ ಪ್ರಬಲ ಶಕ್ತಿ ಕೇಂದ್ರವು ತನಗಿಂತ ಕೆಳವರ್ಗದವರನನ್ನು ಆಕರ್ಷಿಸಲು ತನ್ನ ಗುಣಗಳನ್ನು ವಿಚಾರವಾದ, ತರ್ಕಬದ್ಧತೆ, ಅಭಿವೃದ್ಧಿ, ಸುಭದ್ರ ವ್ಯವಸ್ಥೆ ಎಂದು ಮುಂತಾದಾಗಿ ನಂಬಿಸಿತು. ಆ ಮೂಲಕ ತಾನು ಸಂಪೂರ್ಣ ಭಿನ್ನ ಎಂದು ಪ್ರತಿಪಾಧಿಸಿತು. ಪರಂಪರೆಯ ಬಿಗಿ ಬಂಧದಲ್ಲಿ ಬಂಧಿತರಾಗಿದ್ದ ಜನಸಮುದಾಯಕ್ಕೆ ಈ ಹೊಸ ಅನುಭವಗಳು ಆಕರ್ಷಕವಾಗಿ ಕಂಡವು. ಆಧುನಿಕತೆಯ ಹೆಸರಿನಲ್ಲಿ ಬಂದ ಐಶಾರಾಮಿ ಜೀವನ ಪದ್ಧತಿ, ವಿಲಾಸಿ ಜೀವನ ಅವರಲ್ಲಿ ಹೊಸ ಹುರುಪನ್ನು ತಂದೊಡ್ಡಿತು. ಹಾಗಾಗಿಯೇ ಮಹಿಮಾಪುರದ ಜನಸಮುದಾಯ ತಾವು ಹಿಂದೆಂದೂ ಕಾಣದಂತಹ ವಿಲಾಸೀ ಜೀವನ ಪದ್ಧತಿಗೆ ಸಂಪೂರ್ಣವಾಗಿ ಆಕರ್ಷಿತರಾಗಿದ್ದರು. ಆ ಮೂಲಕ ಹಣ ಮತ್ತು ಅಧಿಕಾರವನ್ನು ಗಳಿಸುವ ಮಾರ್ಗವನ್ನು ಹುಡುಕಿಕೊಂಡರು. ಜೊತೆಗೆ ಅವುಗಳನ್ನು ಶಾಶ್ವತಗೊಳಿಸಿಕೊಳ್ಳುವ ಹುನ್ನಾರವನ್ನೂ ನಡೆಸಿದರು. ಹೀಗಾಗಿಯೇ ಪರಮ ತಿಳಿಸುತಿದ್ದ ನೈತಿಕ ಮಾರ್ಗಗಳು ಅವರ ಕಣ್ಣಿಗೆ ಕಾಣಿಸಲೇ ಇಲ್ಲ. ಹಾಗೆ ಕಂಡಿದ್ದನ್ನು ಪುರೋಹಿತಶಾಹಿ ವರ್ಗ ತನ್ನ ಅನುಕೂಲಕ್ಕೆ ತಕ್ಕಂತೆ ತುರುಚಿ ಜನಸಮುದಾಯಕ್ಕೆ ಮಂಡಿಸುವ ಪ್ರಯತ್ನದಲ್ಲಿ ಯಶಸ್ವಿಯಾಗುತ್ತದೆ. 

ಆಧುನಿಕತೆ ತಂದೊಡ್ಡಿದ ಇಂಥ ಹಣ, ಅಧಿಕಾರ ವಿಲಾಸಿ ಜೀವನವನ್ನು ಜನ ಸಾಮಾನ್ಯರನ್ನು ಮಾತ್ರ ಆಕರ್ಷಿಸದೆ ಆಂಜನೇಯನಂಥ ಧರ್ಮದ ಮೂಲಪುರುಷನನ್ನು ಆಕಷಿಸಿದ್ದು ಪರಮನಂಥ ನೈತಿಕ ಪ್ರಜ್ಞೆಯುಳ್ಳವರಲ್ಲಿ ಬಹಳ ಬೇಸರವನ್ನುಂಟು ಮಾಡಿತು. ಹಾಗಾಗಿಯೇ ಪರಮ ತಾನು ಹುಟ್ಟಬೆಳೆದ ಊರನ್ನು ಆಂಜನೆಯ ಗುಡಿಯನ್ನು ಬಿಟ್ಟು ಪಲಾಯನ ಹೊಂದುತ್ತಾನೆ.

ಆಧುನಿಕ ಯುಗ ಬದಲಾವಣೆಯ ಮತ್ತು ಸ್ಪರ್ಧೆಯ ಯುಗ. ಇಲ್ಲಿ ಮನುಷ್ಯನಷ್ಟೇ ಅಲ್ಲ ದೈವವೂ ಸಹ ಬದಲಾವಣೆಗಳೊಂದಿಗೆ ಹೊಂದಿಕೊಂಡು ನಡೆಯಬೇಕೆಂಬುದು ನಾರದನವಾದ. ಈ ಯುಗದಲ್ಲಿ ಜಯಿಸುವುದು ಬಹಳ ಮುಖ್ಯ. ಒಬ್ಬ ಸೋತು ಹಿನ್ನಡೆದರೆ ಮತ್ತಾರೋ ಜಯ ಸಾಧಿಸುತ್ತಾರೆ ಎಂದು

ತಿಳಿಸುತ್ತಾನೆ. ಹಾಗಾಗಿಯೇ ಪರಂಪರೆ ಮುಂದುವರೆಯ ಬೇಕಾದರೆ ರಾಮಾಚಾರಿಯಂಥ ಪುರೋಹಿತಶಾಹಿಯ ವ್ಯವಸ್ಥೆ ಅತ್ಯಗತ್ಯ ಎಂದು ತಿಳಿಸುತ್ತಾನೆ. ಹಾಗಾಗಿ ಪುರೋಹಿತಶಾಹಿಯ ಜ್ಞಾನ ಶಕ್ತಿ ಹಾಗೂ ಆಧುನಿಕತೆಯ ಪ್ರಭಾವದಿಂದಾಗಿ ಮಾಹಿಮಾಪುರ ದೊಡ್ಡ ಪಟ್ಟಣವಾಗಿ ಪರಿವರ್ತನೆಯಾಗುತ್ತದೆ. ದೈವ ಸಂಬಂಧಿ ನೆಲೆಗಳೆಲ್ಲವೂ ಹೊಸ ರೂಪಪಡೆಯುತ್ತದೆ. ದೇವಸ್ಥಾನವನ್ನು ತನ್ನ ಅಧಿಕಾರ ಕೇಂದ್ರವಾಗಿ ಮಾಡಿಕೊಂಡ ರಾಮಾಚಾರಿಯ ಇಡೀ ವ್ಯವಸ್ಥೆಯನ್ನೇ ಆಳುವ ಶಕ್ತಿ ಪಡೆಯುತ್ತಾನೆ. ಈತನ ಮಹಿಮೆಯಿಂದ ಮಹಿಮಾಪುರ ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಪುನರ್ರಚನೆಗೆ ಒಳಪಡುತ್ತದೆ. ಆಧುನಿಕತೆಯ ಎಲ್ಲಾ ಮೌಲ್ಯಗಳನ್ನು ಮೈಗೂಡಿಸಿಕೊಂಡು ಮಹಿಮಾಪುರ ನಿಜವಾಗಿಯೂ ರಾಮಾಚಾರಿಯ ಮಹಿಮಪುರವಾಗಿ ಪುನರ್ ಸ್ಥಾಪನೆಯಾಗುತ್ತದೆ. ಇದರ ಜೊತೆ ಜೊತೆಗೇ ಮಹಿಮಾಪುರ ಭ್ರಷ್ಟತೆಯ ಕೇಂದ್ರವೂ ಆಗುತ್ತದೆ. ದೇವಸ್ಥಾನ ತನ್ನ ಎಲ್ಲಾ ಪಾವಿತ್ರತೆಯನ್ನು ಕಳೆದುಕೊಂಡು ರಾಮಾಚಾರಿಯ ಭ್ರಷ್ಟಾಚಾರ ಹಾಗು ಅನಾಚಾರಗಳ ಗೂಡಾಗುತ್ತದೆ. ಇದರಿಂದ ಮಾತನಾಡುತ್ತಿದ್ದ ದೈವವೂ ಒಂದು ಶಿಲೆಯಾಗಿ ಮಾತ್ರ ಕಾಣುತ್ತದೆ. ತನ್ನ ವಿರೋಧಿಗಳನ್ನೆಲ್ಲಾ ಬಗ್ಗು ಬಡಿಯುತ್ತಾ ಬಂದ ರಾಮಾಚಾರಿ ಕೊನೆಗೆ ಮಹಿಮಾಪುರದ ಪುರೋಹಿತ ದೈವದ ಸ್ಥಾನ ಪಡೆಯುವುದರ ವ್ಯಂಗ್ಯವನ್ನು ಈ ನಾಟಕ ಕ್ರಿಯಾತ್ಮಕವಾಗಿ ಮಂಡಿಸುತ್ತದೆ.

ಪರಂಪರೆಯ ಇಂಥ ದುರ್ಗತಿಗೆ ಒಂದು ದೃಷ್ಟಿಯಿಂದ ಪರಂಪರೆಯೇ ಕಾರಣವಾಗಿರುತ್ತದೆ. ಅಂದರೆ ಪರಂಪರೆ ಕಾಲದಿಂದ ಕಾಲಕ್ಕೆ ನಿರಂತರವಾಗಿ ಸತ್ಯ, ಧರ್ಮ, ನ್ಯಾಯ, ನೀತಿ, ಪ್ರಾಮಾಣಿಕತೆಗಳನ್ನೇ ತನ್ನ ಸಮುದಾಯದ ಜೀವ ಎಂಬಂತೆ ನಂಬಿಕೊಂಡು ಬಂದಿರುತ್ತದೆ. ಅದನ್ನು ಕೊನೆಯವರೆಗೂ ಉಳಿಸಿಕೊಳ್ಳುವ ಹಲವು ಮಾರ್ಗಗಳನ್ನು ಹುಡುಕುತ್ತಿರುತ್ತದೆ. ಹೀಗೆ ಹಠದಿಂದೆಂಬಂತೆ ಅದು ತನ್ನತನದ ಉಳಿವಿಗಾಗಿ ಹುಡುಕುವ ಮಾರ್ಗಗಳೇ ಹೊಸ ಪರ್ಯಾಯ ಅನುಭವಗಳು ಸುಲಭವಾಗಿ ಒಳನುಗ್ಗಲು ದಾರಿಯಾಗುತ್ತದೆ. ಇದನ್ನೆ ಡೇವಿಡ್ ಕುಕ್ ಎಂಬ ಪ್ರಖ್ಯಾತ ಚಿಂತಕ ಮತ್ತು ದಾರ್ಶನಿಕ "ಪರಂಪರೆ ತನ್ನನ್ನು ತಾನು ಉಳಿಸಿಕೊಳ್ಳಲು ಹುಡುಕುವ ಕೆಲವು ಬಗೆಯ ಮಾರ್ಗಗಳೂ ಆಧುನಿಕತೆಯ ಪ್ರವೇಶವನ್ನು ಸುಲಭ ಮಾಡಿಕೊಡುತ್ತವೆ."[3] ಎಂದು ಹೇಳಿದ್ದಾನೆ. ಅದೇ ರೀತಿ ಮಹಿಮಾಪುರದಲ್ಲಿಯೂ ಪರಂಪರಾವಾದಿಗಳ ಸತ್ಯ, ಧರ್ಮ, ನ್ಯಾಯ, ನೀತಿ, ಪ್ರಾಮಾಣಿಕತೆ, ಮಡಿ–ಮೈಲಿಗೆಗಳೆಂಬ ಮುಂತಾದ ಪಾರಂಪರಿಕ ಮೌಲ್ಯಗಳನ್ನು ಉಳಿಸಿಕೊಳ್ಳಲೇಬೇಕೆಂಬ ಹಠಮಾರಿತನದಿಂದಲೇ ರಾಮಾಚಾರಿಯಂಥಹ ಭ್ರಷ್ಟ, ದುರಾಚಾರಿ, ಅವಕಾಶವಾದಿ ಪುರೋಹಿತಶಾಹಿ ವ್ಯವಸ್ಥೆ ಮಹಿಮಾಪುರವನ್ನು ಪ್ರವೇಶಿಸಲು ಸಹಾಯಕವಾಯಿತು. ಜೊತೆಗೆ ಪರಂಪರೆಯ ಇಂಥ ಕೆಲವು ಹಠಮಾರಿತನಗಳೂ ಅಲ್ಲಿನ ಜನ ಸಾಮಾನ್ಯರಲ್ಲಿ ಕಿರಿ ಕಿರಿಯನ್ನು ತಂದೊಡ್ಡುತ್ತದೆ.

ಹಾಗಾಗಿಯೇ ಅವರಲ್ಲಿ ಪರಂಪರೆಯ ನೀತಿಗಳಿಗೆ ಎದುರಾಗಿ ನಿಲ್ಲುವಂತಹ ದೈರ್ಯವೂ ಒಟ್ಟುಗೂಡಿ ಬರುತ್ತದೆ. ಮೊಖ್ತೇಸರನೂ ಸಹ ಆಂಜನೇಯನ ಹಠಮಾರಿತನಗಳನ್ನು ಕಂಡು ಚಕಿತನಾಗುತ್ತಾನೆ ಮತ್ತು ಅವನ ಆಜ್ಞೆಯನ್ನು ಧಿಕ್ಕರಿಸಿ ನಿಲ್ಲುತ್ತಾನೆ. ದೈವವನ್ನು ಎದುರಿಸಿ ಎಂದೂ ಮಾತನಾಡದ ಮನುಷ್ಯ ಇಂದು ದೈವದ ಆಜ್ಞೆಯನ್ನು ಧಿಕ್ಕರಿಸಿ ನಿಂತಿರುವುದೊಂದು ಹೊಸ ಬೆಳವಣಿಗೆಯಾಗಿದೆ.

ಆಧುನಿಕತೆಯ ಸಂದರ್ಭದಲ್ಲಿಯೂ ಪುರೋಹಿತಶಾಹಿ ಪ್ರಭುತ್ವ ತನ್ನ ಚಾಣಾಕ್ಷತನದಿಂದ, ಚತುರತೆಯಿಂದ ಎಲ್ಲಾ ಕ್ಷೇತ್ರಗಳನ್ನು ಅಂದರೆ ಮನುಷ್ಯನ ಸಾರ್ವತ್ರಿಕ ಬದುಕಿನಿಂದ ಹಿಡಿದು ಖಾಸಗಿ ಬದುಕಿನವರೆಗೆ ಹಿಡಿತವನ್ನು ಸಾಧಿಸುತ್ತದೆ. ಅದು ತನ್ನ ಭೌದ್ಧಿಕ ಮತ್ತು ಜ್ಞಾನ ಬಲದಿಂದ ಎಲ್ಲಾ ಕ್ಷೇತ್ರವನ್ನು ಬಹಳ ವೇಗವಾಗಿ ಆಕ್ರಮಿಸಿಕೊಂಡುಬಿಡುತ್ತದೆ. ಈ ಆಧುನಿಕತೆಯ ಒತ್ತಡ ಹಾಗೂ ಪುರೋಹಿತಶಾಹಿಯ ಆಕ್ರಮಣಶೀಲತೆ ಒಂದು ದೃಷ್ಟಿಯಿಂದ ಮಾನವನ ಜೀವನದ ಮೇಲೆ ಅಗಾದವಾದ ಕೇಡುಂಟುಮಾಡಿದರೂ ಸಹ ಅದು ತನ್ನ ಒಡಲಿನಲ್ಲಿ ಅನೇಕ ಒಳತಿನ ಅಂಶಗಳನ್ನು ಹೊಂದಿತ್ತು. ಈ ರೀತಿಯ ದ್ವಂದ್ವ ಪ್ರವೃತ್ತಿಯನ್ನು ಪ್ರಸನ್ನ ಅವರು "ಆಧುನಿಕತೆಯ ದ್ವಂದ್ವ"[೬] ಎಂದು ಕರೆಯುತ್ತಾರೆ. "ಆಧುನಿಕತೆ ಒಳ್ಳೆಯದೂ ಹೌದು, ಕೆಟ್ಟದ್ದೂ ಹೌದು. ಅದನ್ನು ಸಂಪೂರ್ಣವಾಗಿ ತಿರಸ್ಕರಿಸುವುದಾಗಲೀ, ಅಥವಾ ಇಡಿಯಾಗಿ ಅಪ್ಪಿಕೊಳ್ಳುವುದಾಗಲೀ ಪರಿಸ್ಥಿತಿಯ ಸರಳೀಕರಣವಾಗುತ್ತದೆ. ಅದೇ ರೀತಿ ಹಳತೂ ಕೂಡ. ಹಳತಿನಲ್ಲಿ ಎಲ್ಲವೂ ಛಂದವಿದ್ದಿದ್ದರೆ ಹಳತು ಸೋಲುತ್ತಲೇ ಇರಲಿಲ್ಲ. ಪುರಾತನ ಭಾರತೀಯ ಸಮಾಜವು ಎಲ್ಲಾ ರೀತಿಯಿಂದಲೂ ಆರೋಗ್ಯಕರವಾಗಿದ್ದಿದ್ದರೆ ನಾವು ಬ್ರಿಟೀಷರ ಗುಲಾಮರಾಗುತ್ತಿರಲಿಲ್ಲ" ಎಂದು ವಿಶಾಧಿಸುತ್ತಾರೆ.

ಆಧುನಿಕ ಪ್ರಭುತ್ವ ಹಾಗೂ ಪುರೋಹಿತಶಾಹಿ ಯಾಜಮಾನ್ಯ ಸಮಾಜದಲ್ಲಿ ಮತ್ತು ಜನಸಮುದಾಯದ ಬದುಕಿನಲ್ಲಿ ಪ್ರವೇಶಿಸಲು ಹಾಗೂ ನಿಯಂತ್ರಣ ಸಾಧಿಸಲು ನಮ್ಮ ಸಮಾಜದಲ್ಲಿನ ಆರ್ಥಿಕ, ಸಾಮಾಜಿಕ ಕಾರಣವಾಗಿದ್ದವು. ಜನಸಮುದಾಯದ ದೌರ್ಬಲ್ಯಗಳೇ ಹೊರಗಿನ ಪ್ರಬಲ ಶಕ್ತಿಗಳು ಆಕ್ರಮಿಸಲು ಅವಕಾಶಮಾಡಿಕೊಟ್ಟಿತ್ತು. ಹೀಗೆ ನಮ್ಮಲ್ಲಿನ ದೌರ್ಬಲ್ಯಗಳನ್ನು ತಮ್ಮ ಪ್ರಾಬಲ್ಯವನ್ನಾಗಿ ಮಾಡಿಕೊಂಡು ಪ್ರವೇಶಿಸಿದ ಆಧುನಿಕತೆಯನ್ನು ನಾವು ಸಂಪೂರ್ಣವಾಗಿ ದೂಷಿಸುವುದೂ ಸಾಧ್ಯವಿಲ್ಲ. ಏಕೆಂದರೆ ಅದು ತನ್ನ ಆಕ್ರಮಣದ ಜೊತೆಗೆ ಒಳಿತು-ಕೆಡುಕು ಎರಡನ್ನೂ ಸಮ ಪ್ರಮಾಣದಲ್ಲಿ ತಂದೊಡ್ಡಿತ್ತು. 'ಮಹಿಮಾಪುರ' ನಾಟಕದಲ್ಲಿಯೂ ಸಹ ರಾಮಾಚಾರಿಯಂಥ ಪುರೋಹಿತಶಾಹಿ ವ್ಯವಸ್ಥೆ ತನ್ನ ಅಸ್ತಿತ್ವ ಸ್ಥಾಪನೆಗೆ, ಅಧಿಕಾರ ಸ್ಥಾಪನೆಗೆ ಎಷ್ಟು ಚತುರತೆ, ಚಾಣಾಕ್ಷತನ ಮತ್ತು ಹುನ್ನಾರಗಳನ್ನು

ಉಪಯೋಗಿಸಿದ್ದನೋ ಅಷ್ಟೇ ಚತುರತೆ, ಚಾಣಾಕ್ಷತನ ಮತ್ತು ಹುನ್ನಾರಗಳನ್ನು ಮಹಿಮಾಪುರದ ಅಭಿವೃದ್ಧಿ ಕಾರ್ಯದಲ್ಲಿಯೂ ಉಪಯೋಗಿಸುತ್ತಾನೆ. ಅವನ ಆಗಮನದ ನಂತರವೇ ಮಹಿಮಾಪುರದಲ್ಲಿ ಗಣನೀಯವಾದ ಬದಲಾವಣೆಗಳಾಗುತ್ತವೆ. ಹಾಳು ಕೊಂಪೆಯಾಗಿದ್ದ ಮಹಿಮಾಪುರ ಎಲ್ಲಾ ಹಂತದಲ್ಲಿ ಪ್ರಗತಿಯನ್ನು ಸಾಧಿಸುತ್ತದೆ. ಮಹಿಮಾಪುರದಲ್ಲಿ ಆದಂತಹ ಇಂಥ ಬದಲಾವಣೆಯಿಂದ ಅಲ್ಲಿನ ಪ್ರತಿಯೊಬ್ಬರು ಸಂತೋಷ ಪಡುತ್ತಾರೆ. ವಿಕ್ರಮನೂ ಸಹ ಇಂಥ ಬದಲಾವಣೆಗಳಿಗೆ ಸಂತೋಷಿಸುತ್ತಾನೆ. ಆದರೆ ಅದು ಅಭಿವೃದ್ಧಿ ಹೊಂದುತ್ತಿರುವ ವೇಗ ಮತ್ತು ಅದಕ್ಕಾಗಿ ನಡೆಸುತ್ತಿರುವ ಪೈಪೋಟಿಯನ್ನು ಕಂಡರೆ ಮಾತ್ರ ಆಶ್ಚರ್ಯ ಮತ್ತು ಭಯ ಎರಡೂ ಏಕಕಾಲಕ್ಕೆ ಉಂಟಾಗುತ್ತದೆ ಎಂದು ವಿಕ್ರಮ ದಿಗ್ಭ್ರಾಂತನಾಗುತ್ತಾನೆ. ಪ್ರಗತಿ ಮತ್ತು ಅಧಃಪತನಗಳ ಬೀಜಗಳನ್ನು ಹೀಗೆ ಒಟ್ಟಿಗೆ ತನ್ನ ಬಸಿರಿನಲ್ಲಿ ಇಟ್ಟುಕೊಂಡ ಆಧುನಿಕ ಜಗತ್ತಿನ ಸೂಕ್ಷ್ಮ ಹಿಂಸೆಗಳನ್ನು ಕಾಪ್ಕ ಬಹಳ ಸ್ಪಷ್ಟವಾಗಿ ಗ್ರಹಿಸಿದ್ದಾನೆ. ಇವನು "ಆಧುನಿಕ ಜಗತ್ತು ಎಂದರೆ ಮಾನವ ತನ್ನ ಹಾದಿ ಕಳೆದು ಕೊಂಡು ದಿಕ್ಕೆಟ್ಟು ಪರದಾಡುವ ಚಕ್ರವ್ಯೂಹ"[2] ಎಂದು ಹೇಳುತ್ತಾನೆ. ಇಂಥ ಚಕ್ರವ್ಯೂಹದಲ್ಲಿ ಸಿಲುಕಿದ ಮುಗ್ಧ ಚೇತನಗಳು ಮಾತ್ರ ಹೊರಬರಲಾರದೆ ಒಳಗೂ ಇರಲಾರದೆ ಬಹಳ ನೋವನ್ನನುಭವಿಸುತ್ತವೆ ಎಂಬುದನ್ನು ಪರಮನಂಥ ಪಾತ್ರಗಳ ಮೂಲಕ ಈ ನಾಟಕ ಕ್ರಿಯಾತ್ಮಕವಾಗಿ ಅಭಿವ್ಯಕ್ತಿಸುತ್ತದೆ.

ಕೊನೆ ಟಿಪ್ಪಣಿ :

೧. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ : ನಟರಾಜ್ ಹುಳಿಯಾರ್ : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪,

೨. ಉಲ್ಲೇಖ, ಅದೇ ಪುಟ – ೧೩೦

೩. ಅದೇ ಪುಟ – ೧೩೧

೪. ದೇಸಿ ಜೀವನ ಪದ್ಧತಿ : ಪ್ರಸನ್ನ : ಒಂಟಿದನಿ ಪ್ರಕಾಶನ : ೨೦೦೫, ಪುಟ – ೨೭

೫. ಉಲ್ಲೇಖ : ಅದೇ, ಪುಟ – ೧೪೧

೬. ದೇಸಿ ಜೀವನ ಪದ್ಧತಿ : ಪ್ರಸನ್ನ : ಒಂಟಿದನಿ ಪ್ರಕಾಶನ : ೨೦೦೫, ಪುಟ – ೨೫

೭. ಉಲ್ಲೇಖ : ಅದೇ, ಪುಟ – ೧೫೧

# ಅಧ್ಯಾಯ : ೫

## ದಾಂಪತ್ಯದ ವಿಘಟನೆ : 'ಜಂಗಮದ ಬದುಕು'

# ಅಧ್ಯಾಯ – ೫

## ದಾಂಪತ್ಯದ ವಿಘಟನೆ : 'ಜಂಗಮದ ಬದುಕು'

ಪ್ರಸನ್ನ ಅವರ 'ಜಂಗಮದ ಬದುಕು' ಆಧುನೀಕರಣದ ಸಂದರ್ಭದಲ್ಲಿ ಜಾಗತೀಕರಣದ ಪ್ರಭಾವದಿಂದ ಮಹತ್ವದ ಸಮಸ್ಯೆಯಾಗಿ ಕಾಡುತ್ತಿರುವ ವ್ಯಕ್ತಿ ವಿಘಟನೆ ಹಾಗೂ ದಾಂಪತ್ಯದ ವಿಘಟನೆ ಮತ್ತು ಅದರ ಸುತ್ತ ಹೆಣೆದುಕೊಂಡಿರುವ ನೈತಿಕ ಪ್ರಶ್ನೆಯನ್ನು ಚರ್ಚಿಸುತ್ತದೆ. ಜೊತೆಗೆ ಕುಟುಂಬದಲ್ಲಿ ತಲೆದೋರುತ್ತಿರುವ ವಿಘಟನೆಯ ಸ್ವರೂಪವನ್ನು ಶೋಧಿಸುತ್ತದೆ. ದಾಂಪತ್ಯದಲ್ಲಿ ಏಳುವ ಸಮಸ್ಯೆಗಳು, ಬಿರುಕುಗಳು, ಸಂಬಂಧಗಳ ಏರುಪೇರು, ಹಾದರ, ಪುರುಷಕೇಂದ್ರಿತ ಜಗತ್ತಿನಲ್ಲಿ ಹೆಣ್ಣಿನ ನಿರ್ಧಾರಗಳು ಮೊದಲಾದ ಕುಟುಂಬಕೇಂದ್ರಿತ ಬಿಕ್ಕಟ್ಟುಗಳ ಮೂಲಕ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುತ್ತದೆ. ಅಲ್ಲದೆ, ಸ್ಥಾವರ–ಜಂಗಮ, ಗಂಡು–ಹೆಣ್ಣು, ವಾಸ್ತವ–ಭ್ರಮೆ, ನೈತಿಕತೆ–ಅನೈತಿಕತೆ, ಪರಂಪರೆ ಮತ್ತು ಆಧುನಿಕತೆ ಮುಂತಾದವುಗಳ ನಡುವಿನ ವೈರುಧ್ಯ ಹಾಗೂ ಸಂಘರ್ಷಗಳನ್ನು ಇಲ್ಲಿ ಕಾಣಬಹುದಾಗಿದೆ. ಆಧುನಿಕ ಮನುಷ್ಯನನ್ನು ಕಾಡುತ್ತಿರುವ ಕೀಳರಿಮೆ, ಹತಾಶೆ, ಅತಂತ್ರಸ್ಥಿತಿ ಮತ್ತು ಒಂಟಿತನಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

ಕುಟುಂಬವು ಸಮುದಾಯದ ಮೂಲ ಘಟಕ ಹಾಗೂ ಪುರುಷಾಧಿಕಾರದ ಶಕ್ತಿರಾಜಕಾರಣದ ಕೇಂದ್ರವೂ ಆಗಿದೆ. ಅಲ್ಲಿ ಗಂಡಿನ ಪ್ರತಿಷ್ಠೆ, ಅಧಿಕಾರ, ಅಹಂ, ಹೆಣ್ಣಿನ ವಿರುದ್ಧ ಶೋಷಣೆ, ದಬ್ಬಾಳಿಕೆ, ಲಿಂಗರಾಜಕಾರಣ, ಲೈಂಗಿಕ ರಾಜಕಾರಣ ಮೊದಲಾದ ಸನ್ನಿವೇಶಗಳು ಘಟಿಸುತ್ತಿರುತ್ತವೆ. ಅಲ್ಲದೆ ಕುಟುಂಬದಲ್ಲಿ ಏಳುವ ಸಮಸ್ಯೆಗಳು, ಬಿರುಕುಗಳು, ಸಂಬಂಧಗಳ ಏರುಪೇರು, ಸಾಮಾಜಿಕವಾಗಿ ದೂರಗಾಮಿ ಪರಿಣಾಮ ಬೀರಬಲ್ಲಂಥವು. ಪ್ರಸನ್ನ ಅವರ 'ಜಂಗಮದ ಬದುಕು' ನಾಟಕವು ಈ ಬಗೆಯ ಕುಟುಂಬ ಕೇಂದ್ರತ ನೆಲೆಯಲ್ಲಿ ಸಾಮಾಜಿಕವಾದ ಜ್ವಲಂತ ಸಮಸ್ಯೆಗಳನ್ನು ನಾಟಕೀಯವಾಗಿ ಮಂಡಿಸುತ್ತದೆ. ವ್ಯಕ್ತಿಯ ವಿಘಟನೆ, ದ್ವಂದ್ವ, ಸಿನಿಕತನ ಹಾಗೂ ಮನುಷ್ಯ ಖಾಸಗಿಯಾಗಿ ಅನುಭವಿಸುವ ಯಾತನೆ, ವ್ಯಂಗ್ಯ, ವಿಘಟನೆ ಮತ್ತು ಕ್ರೌರ್ಯಗಳನ್ನು ಕ್ರಿಯಾಶೀಲವಾಗಿ ಪ್ರಸನ್ನ ಅವರು ಈ ನಾಟಕದಲ್ಲಿ ಚಿತ್ರಿಸಿದ್ದಾರೆ.

'ಜಂಗಮದ ಬದುಕು' ನಾಟಕದಲ್ಲಿ ಮೂರೇ ಪಾತ್ರಗಳಿದ್ದು, ಪ್ರತಿಯೊಂದೂ ಪಾತ್ರವೂ ತಮ್ಮ ಸ್ವಂತ ಅಸ್ತಿತ್ವ ಸ್ಥಾಪನೆಗಾಗಿ ಹವಣಿಸುತ್ತಿವೆ. 'ಆಕೆ'ಯ ಪಾತ್ರ ಪಾರಂಪರಿಕ ಮೌಲ್ಯಗಳ ಜಡತೆಯಿಂದ ಬೇಸತ್ತು, ಅಲ್ಲಿನ ಕಟ್ಟುಪಾಡುಗಳನ್ನು ಮೀರಿ ಬಿಡುಗಡೆಯನ್ನು ಪಡೆಯಬೇಕೆಂದು ಹಂಬಲಿಸುತ್ತದೆ. ಆಧುನಿಕ ಜಗತ್ತಿನಲ್ಲಿಯೂ ಇತರರನ್ನು ನಂಬಿಸಲು, ಇತರರನ್ನು ಸಂತೋಷಗೊಳಿಸಲು ಅಸಹಜವಾದ ಜೀವನ ನಡೆಸಲು ಆಕೆಯ ಮನಸ್ಸು ಎಂದಿಗೂ ಒಪ್ಪುವುದಿಲ್ಲ. ಅದು ತನ್ನ ಗಂಡನ ಜೊತೆ ಇರಬಹುದು ಅಥವಾ ತಂದೆಯ ಜೊತೆ ಇರಬಹುದು.

> "ಶುದ್ಧ ಅಸಹಜಕತೆಯ ಬದುಕು ನನಗೂ ಸಾಕಾಗಿದೆ."
> "ನಮ್ಮ ಅಭಿರುಚಿಗಳು, ಆಯ್ಕೆಗಳು, ಆಸಕ್ತಿಗಳು ಎಲ್ಲವನ್ನು
> ಸಣ್ಣತನ ನುಂಗಿ ಹಾಕಿದೆ."[೧]

ದಾಂಪತ್ಯ ಜೀವನದಲ್ಲಿ ಗಂಡ-ಹೆಂಡತಿ ಇಬ್ಬರೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಅವರಿಬ್ಬರಲ್ಲಿ ಯಾರೂ ಶ್ರೇಷ್ಠರಲ್ಲ, ಯಾರೂ ಕನಿಷ್ಠರಲ್ಲ. ಪರಸ್ಪರ ಗೌರವ ಭಾವನೆಯಿಂದ ಬದುಕಿದರೆ ಮಾತ್ರ ಸುಖ ಜೀವನ ಸಾಧ್ಯವಾಗುವುದು. ಆದರೆ 'ಆಕೆ'ಗೆ ತನ್ನ ಗಂಡನಲ್ಲಿದ್ದ ಕೀಳರಿಮೆಯ ಭಾವನೆಗಳು ಬದುಕಿನಲ್ಲಿ ಅಸಹಜತೆಯನ್ನು ತಂದೊಡ್ಡಿದ್ದವು. ಆಕೆಯ ಗಂಡ ಶಿವಕುಮಾರ

> "ಸಿದ್ದೇಶ್ವರ ಮಠದಲ್ಲಿ ಔದಾರ್ಯದ ಅನ್ನ ತಿಂದು
> ಬೆಳೆದವನು ನಾನು"
> "ಅತಂತ್ರ ಬದುಕು ನಿನಗೆ ಆಯ್ಕೆ, ನಿನ್ನ ಹೊಸ ಆವಿಷ್ಕಾರದ
> ಲಾಂಛನ! ಆದರೆ ಅತಂತ್ರ ಬದುಕ ನನ್ನ ಸಹಜ ಸ್ಥಿತಿ ಮಠದಲ್ಲಿ
> ಬೆಳೆದ ಅನಾಥ ಶಿಶು ನಾನು."[೨]

ಎಂದು ತನ್ನ ಬಗೆಗೆ ತಾನೇ ಒಂದು ರೀತಿಯ ಕೀಳರಿಮೆಯನ್ನು ಸೃಷ್ಟಿಸಿಕೊಂಡಿದ್ದ. ಆಕೆ(ಸುಕುಮಾರಿ)ಯ ತಂದೆ ಮಂತ್ರಿಯಾಗಿದ್ದ ಕಾರಣಕ್ಕೆ ಮಠದ ಸ್ವಾಮಿಗಳ ಜೊತೆ ವೇದಿಕೆಯಲ್ಲಿ ಕುಳಿತುಕೊಂಡು ಮಾತನಾಡುತ್ತಿದ್ದರು. ಇಂಥ ವೇದಿಕೆಯಲ್ಲಿ—ಮೇಲ್ಮಟ್ಟದಲ್ಲಿ ಕುಳಿತ ವ್ಯಕ್ತಿ ತನ್ನನ್ನು ಅಳಿಯನನ್ನಾಗಿ ಮಾಡಿಕೊಂಡದ್ದು ಶಿವಕುಮಾರನಿಗೆ ಸಂತಸತಂದಿತು. ಅವರ ವ್ಯಕ್ತಿತ್ವ, ದರ್ಪ, ಧೈರ್ಯ, ದೃಢತೆ ಎಲ್ಲವನ್ನು ಶಿವಕುಮಾರ ಮೆಚ್ಚಿದ್ದ. ಆದರೆ ಅದಕ್ಕಾಗಿ ತನ್ನ ಸ್ವಾಭಿಮಾನ ಮತ್ತು ಪ್ರಾಮಾಣಿಕತೆಯನ್ನು

ಬಿಟ್ಟುಕೊಡಲು ಶಿವಕುಮಾರ ತಯಾರಾಗಿಲ್ಲ. ಹಾಗಾಗಿಯೇ ಅವನು ತನ್ನ ಮಾವ ಕಾರ್ಖಾನೆ ಪ್ರಾರಂಭಿಸಲು ನೀಡಿದ್ದ ಹಣವನ್ನು ಸಾಲದ ರೂಪದಲ್ಲಿ ಹಿಂದಿರುಗಿಸುವುದಾಗಿ ನಿರ್ಧರಿಸಿದ.

ಶಿವಕುಮಾರ ತಾನು ಹುಟ್ಟಿ ಬೆಳೆದ ಪರಿಸರಕ್ಕೆ ಬಹಳವಾಗಿ ಹೊಂದಿಕೊಂಡು ಬಿಟ್ಟಿದ್ದ. ಜೊತೆಗೆ ಅವನಲ್ಲಿದ್ದ ಸತ್ಯ, ಸ್ವಾಭಿಮಾನ ಮತ್ತು ಪ್ರಾಮಾಣಿಕತೆಗಳು ಆಧುನಿಕತೆಯ ಹೊಸ ಅನುಭವಗಳಿಗೆ ಹೊಂದಿಕೊಳ್ಳುವುದು ಕಷ್ಟವಾಗುತ್ತಿತ್ತು. ಹಾಗಾಗಿಯೇ ಅವನು ತನ್ನ ಹೆಂಡತಿಯ ಜೊತೆ ಹೊಂದಿಕೊಂಡು ಬಾಳುವುದಕ್ಕೂ ಪ್ರಯಾಸ ಪಡುತ್ತಾನೆ. ತನ್ನನ್ನು ತಾನು ಕೀಳಾಗಿ ಕಾಣುತ್ತಾನೆ.

'ಆಕೆ'ಗೆ ತನ್ನ ಗಂಡನ ಇಂಥ ವರ್ತನೆಗಳು ಬೇಸರವನ್ನುಂಟುಮಾಡುತ್ತವೆ. ತನ್ನ ತಂದೆ ಇತರ ಅಳಿಯಂದಿರಿಗೆ ಮಾಡಿದ ಹಾಗೆಯೇ ಶಿವಕುಮಾರನಿಗೂ ಹಣದ ಸಹಾಯ ಮಾಡಿದ್ದಾರೆ, ಇದಕ್ಕಾಗಿ ಶಿವಕುಮಾರ ಕೀಳರಿಮೆ ಪಡುವುದು ಬೇಕಿಲ್ಲ ಎಂಬುದು ಆಕೆಯ ವಾದ. ಜೊತೆಗೆ ಅದು ಅವನ ಹಕ್ಕು ಎಂದೂ ಅವಳು ತಿಳಿಸಿಹೇಳುತ್ತಾಳೆ.

> "ಎಲ್ಲ ಅಳಿಯಂದಿರೂ ಅದು ತಮ್ಮ ಜನ್ಮಸಿದ್ಧ ಹಕ್ಕು ಎಂಬಂತೆ
> ಸ್ವೀಕರಿಸುತ್ತಾರೆ. ಹಾಗೆ ಮಾಡದಿದ್ದರೇನೇ ಅವರಿಗೆ ಸಿಟ್ಟು ಬರುತ್ತದೆ.
> ನೀನು ಭಿನ್ನ! ನಮ್ಮಪ್ಪ ಸಹಾಯ ಮಾಡಿದಷ್ಟೂ ನಿನಗೆ ಸಿಟ್ಟು ಬರುತ್ತದೆ.
> ಒಳಗೊಳಗೇ ಕುದಿಯುತ್ತೀಯ, ನಿನ್ನ ಸಿಟ್ಟು ನನ್ನ ಮೇಲೆ ತಿರುಗುತ್ತದೆ."[7]

ಹೀಗೆ ತಂದೆ ಮಾಡುತ್ತಿದ್ದ ಸಹಾಯಗಳಿಗೆ, ಒಳ್ಳೆಯ ಕೆಲಸಗಳಿಗೆ ಶಿವಕುಮಾರನ ಭಿನ್ನ ಪ್ರತಿಕ್ರಿಯೆಗಳು ಅವಳ ಬದುಕನ್ನು ಅತಂತ್ರಸ್ಥಿತಿಗೆ ತಳ್ಳಿದವು. ತನ್ನ ತಂದೆಯ ಒಳ್ಳೆಯತನಗಳನ್ನು ಅರ್ಥಮಾಡಿಕೊಳ್ಳುವಂತೆ ಶಿವಕುಮಾರನಿಗೆ ತಿಳಿಸುತ್ತಿದ್ದಳು. ತಂದೆಯ ಒಳ್ಳೆಯತನವನ್ನು, ಪ್ರೀತಿಯನ್ನು, ಭಾಂದವ್ಯವನ್ನೂ ಸವಿಯಲಾರದೆ, ಅತ್ತ ಗಂಡನ ಪ್ರೀತಿ ಭಾಂದವ್ಯವನ್ನೂ ಸವಿಯಲಾರದೆ ಅತಂತ್ರಳಾದ ಆಕೆ(ಸುಕುಮಾರಿ)ಗೆ ಬದುಕು ಬೇಸರವನ್ನು ತಂದೊಡ್ಡಿದೆ.

ಬದುಕಿನ ಇಂಥ ಅತಂತ್ರ ಸ್ಥಿತಿಯನ್ನು ಮೀರಲು 'ಆತ' ಇವಳಲ್ಲಿ ಸ್ವಲ್ಪ ಮಟ್ಟಿಗೆ ಕಾರಣಕರ್ತನಾಗುತ್ತಾನೆ. ಆದರೆ ಆ ಅನೈತಿಕತೆ ಇವಳ ಬದುಕನ್ನು ಮತ್ತಷ್ಟು ಅತಂತ್ರ ಸ್ಥಿತಿಗೆ ದೂಡುತ್ತದೆ. ಇಲ್ಲಿ ತಾನು ಹೀಗೆ ಮಾಡುವುದು ಪಾಪ ಕೃತ್ಯ ಎಂದು ತಿಳಿದಿದ್ದರೂ ಅದು ಅವಳಿಗೆ ಬೇಕು.

"ಪಾಪ ಮಾಡ್ತಾ ಇದೀನಿ ಅಂತ ಅನ್ನಿಸಲಿಲ್ಲ."

"ನನಗ್ಯಾಕೆ ಪಾಪಪ್ರಜ್ಞೆ ಕಾಡಲಿಲ್ಲವೋ ಗೊತ್ತಿಲ್ಲ,

ಕಾಡಬೇಕಿತ್ತು ನಿಜ; ಆದರೆ ಕಾಡಲಿಲ್ಲ."[೩]

ಹೀಗೆ ಆಕೆ ತನ್ನ ಕೃತ್ಯ ತಪ್ಪು ಎಂದು ತಿಳಿದಿದ್ದರೂ ಅದನ್ನು ತಪ್ಪಾಗಿ ತಿಳಿಯುವುದಿಲ್ಲ. ಅದು ಅವಳ ಅಪೇಕ್ಷಣೆಯೇ ಆಗಿದ್ದಿತು. ತನ್ನ ಗಂಡ ಶಿವಕುಮಾರನಲ್ಲಿ ಕಾಣದ ಪಾರದರ್ಶಕತೆ 'ಆತ'ನಲ್ಲಿ ಕಂಡಿದ್ದಳು. ಹಾಗಾಗಿ ಅದು ಅವಳಿಗೆ ಬೇಕಿತ್ತು. ತನ್ನ ಗಂಡನಲ್ಲಿಯೂ ಈ ಪಾರದರ್ಶಕತೆಯನ್ನು ಬಯಸುತ್ತಿದ್ದಳು. ಆದರೆ ಅದೆಂದಿಗೂ ಸಾಧ್ಯವಾಗದೆ ಇದ್ದುದರಿಂದಲೇ ದಾಂಪತ್ಯ ಜೀವನದಿಂದ ದೂರ ಸರಿಯುವ ಪ್ರಯತ್ನ ಮಾಡುತ್ತಾಳೆ.

'ಆಕೆ' ತನ್ನ ಬದುಕಿನಲ್ಲಿ ಇದ್ದಂತಹ ಅಸಹಜತೆಯನ್ನು ಅತಂತ್ರಸ್ಥಿತಿಯನ್ನು, ದ್ವಂದ್ವಗಳನ್ನು ಮೀರಲು 'ಆರ್ಟ್ ಹಿಸ್ಟರಿ'ಯಲ್ಲಿ ವ್ಯಾಸಂಗ ಮುಂದುವರಿಸಲು ಇಂಗ್ಲೆಂಡಿಗೆ ಹೋಗುವ ನಿರ್ಧಾರ ಮಾಡುತ್ತಾಳೆ. ಆದರೆ ಶಿವಕುಮಾರ ಆಕೆ ಮದುವೆ ಮುರಿಯಲೆಂದೇ ಓದಿನ ನೆಪಮಾಡಿಕೊಂಡು ಇಂಗ್ಲೆಂಡಿಗೆ ಹೋಗುತ್ತಿದ್ದಾಳೆಂದು ತಿಳಿದು, ತನ್ನನ್ನು ಹಾಗೆ ಬಿಟ್ಟು ಹೋಗಬಾರದೆಂದು ಬೇಡುತ್ತಾನೆ.

"ನೀನು ಎದುರಿಗಿದ್ದಷ್ಟು ಹೊತ್ತು ನಿನ್ನನ್ನು ಸಹಿಸಲಾರೆ........

ನೀನು, ನಿನ್ನ ಶ್ರೀಮದ್ ಗಾಂಭೀರ್ಯ, ಪೊಳ್ಳು ಬಂಡಾಯ,

ಬೆದರಿಕೆಗಳು........

ಆದರೆ ನೀನು ಮರೆಯಾದರೂ ಸಹಿಸಲಾರೆ ನಾನು..........

ನನಗೆ ಅಂಟಿಕೊಂಡಿರುವ ಭಯಾನಕ ಖಾಯಿಲೆ ನೀನು

ಆದರೂ ನೀನು ಬೇಕು ನನಗೆ........"[೪]

ಎಂದು ಹಲುಬುತ್ತಾನೆ ಶಿವಕುಮಾರ ಆಕೆಯನ್ನು ಪ್ರೀತಿಸುತ್ತಾನೆ. ಆಕೆಯ ಜೊತೆಗಿನ ಒಡನಾಟ, ಬಾಂದವ್ಯ ಎಲ್ಲವೂ ಅವನಿಗೆ ಬೇಕು. ಆದರೆ ಆಕೆಯಲ್ಲಿರುವ ಶ್ರೀಮಂತಿಕೆಯ ದರ್ಪ ಮಾತ್ರ ಬೇಡ. ಆಕೆಯ ಜೊತೆಗೆ ದಾಂಪತ್ಯ ಸಖ್ಯವಿದೆ, ಆದರೆ ದಾಂಪತ್ಯದ ಹೆಸರಿನಲ್ಲಿ ಆಕೆ ಮತ್ತು ಆಕೆಯ ತಂದೆ ತೋರಿಸುವ ದಯೆ, ಕರುಣೆ, ಅನುಕಂಪ, ಔದಾರ್ಯ, ಶ್ರೀಮಂತಿಕೆಯ ಆಡಂಬರಗಳು ಮಾತ್ರ ಅವನಿಗೆ ಸಹಿಸಲಸಾಧ್ಯವಾದ ನೋವನ್ನುಂಟು ಮಾಡುತ್ತಿದ್ದವು.

ಹೀಗೆ ಇಬ್ಬರ ಬದುಕನ್ನು ಅಸಹಾಯಕತೆ ಮತ್ತು ಅತಂತ್ರಸ್ಥಿತಿ ಆವರಿಸಿಕೊಂಡು ಬಿಟ್ಟಿದೆ. ಈ ಸ್ಥಿತಿಯನ್ನು ಹೇಗಾದರೂ ಮೀರಲೇಬೇಕೆಂದು ಇಬ್ಬರೂ ತುಡಿಯುತ್ತಿದ್ದಾರೆ. ಇದನ್ನು ಹೇಮಾ ಪಟ್ಟಣಶೆಟ್ಟಿ ಅವರು ತಮ್ಮ ಕೃತಿಯಲ್ಲಿ 'ಜಂಗಮದ ಬದುಕು' ನಾಟಕದ ಬಗ್ಗೆ ಬರೆಯುತ್ತಾ "ಮದುವೆ ಎಂಬುದು ಸ್ಥಾವರವಾದ ವ್ಯವಸ್ಥೆ ಈ ವ್ಯವಸ್ಥೆಯಲ್ಲಿ ಸಿಕ್ಕ ಜೀವಗಳು ಜಂಗಮ ಬದುಕಿಗಾಗಿ ಹಾತೊರೆಯುತ್ತವೆ."[೨೫] ಎಂದು ತಿಳಿಸುತ್ತಾರೆ. ಆಕೆ ಮತ್ತು ಶಿವಕುಮಾರ ಇಬ್ಬರೂ ತಮ್ಮ ತಮ್ಮ ಸ್ಥಿತಿಯನ್ನು ಮೀರಿ ಬಿಡುಗಡೆಯನ್ನು ಪಡೆಯಬೇಕೆಂದು ಹಂಬಲಿಸುತ್ತಾರೆ. ಹಾಗಾಗಿಯೇ ನಾಟಕದ ಕೊನೆಯ ಭಾಗದಲ್ಲಿ ಶಿವಕುಮಾರ ಆಕೆಯನ್ನು ಅವಳ ಪಾಡಿಗೆಬಿಟ್ಟು ತನ್ನ ಸ್ವಂತ ಊರಿಗೆ ಹೋಗುವ ನಿರ್ಧಾರ ಮಾಡುತ್ತಾನೆ.

ಆದರೆ ಆಕೆ ಹೊರಟು ಹೋದ ನಂತರ ಶಿವಕುಮಾರ ಉನ್ಮಾದಕ್ಕೆ ತುತ್ತಾಗುತ್ತಾನೆ. ದೇವರ ಜೊತೆ ಮಾತನಾಡುವುದು, ನಗುವುದು, ಚರ್ಚೆಗಳು, ಕೂಗಾಟಗಳು ಮುಗಿಲು ಮುಟ್ಟುವುದು. ಅವನ ಈ ವರ್ತನೆಗಳು ನಾಗರೀಕ ಮಿತಿಗಳನ್ನು ಮೀರಿದ್ದವು. ಇವನ ಬಾಲ್ಯದ ಕಹಿ ಅನುಭವಗಳು, ಸ್ವಂತದ ಕೀಳರಿಮೆ, ಮದುವೆಯ ವಿಘಟನೆ ಎಲ್ಲವೂ ಇವನ ಉನ್ಮಾದಕ್ಕೆ ಕಾರಣವಾಗಿದ್ದವು. ಈ ರೀತಿ ಸಂಸಾರದಲ್ಲಿ, ಬದುಕಿನಲ್ಲಿ ಬೇಸತ್ತ ಮನುಷ್ಯ ಉನ್ಮತ್ತನಾಗುವುದು ಸಹಜವಾದ ಸಂಗತಿ. 'ಮಹಿಮಾಪುರ' ನಾಟಕದಲ್ಲಿ ಪರಮನೂ ಸಹ ಸಮಾಜದಲ್ಲಿ ಹೆಚ್ಚುತ್ತಿದ್ದ ಮೋಸ, ವಂಚನೆಗಳಿಗೆ ಕಾರಣವಾದ ರಾಮಾಚಾರಿಯ ಅಮಾನವೀಯತೆಯ ಕೃತ್ಯಗಳನ್ನು ಬಯಲಿಗೆಳೆಯಲು ಹರಸಾಹಸ ಮಾಡಿ ಸೋತು ಉನ್ಮತ್ತನಾಗುತ್ತಾನೆ.

ಈ ಉನ್ಮಾದ ಸ್ಥಿತಿಯಿಂದ ಹೊರಬಂದ ಶಿವಕುಮಾರ ಹಾಗಾಗಲು ಮದುವೆಯ ನಂತರದ ತನ್ನ ಅಸಹಜ ಜೀವನವೇ ಕಾರಣ, ಅಲ್ಲಿ ತಾನು ಅನುಭವಿಸಿದ ಸೋಲುಗಳ ಕಾರಣಕ್ಕಾಗಿಯೇ ಉನ್ಮತ್ತನಾದದ್ದು ಎಂದು ಆಕೆಯ ಬಳಿ ತನ್ನ ಅಂತರಂಗದಲ್ಲಿ ನಡೆಯುತ್ತಿದ್ದ ಒಳಸಂಘರ್ಷಗಳನ್ನು ನಾಟಕದ ಕೊನೆಯಲ್ಲಿ ಅನಾವರಣಗೊಳಿಸುತ್ತಾನೆ.

> "ಮಠದಲ್ಲಿ ಕಲಿತಿದ್ದ ಶಿಸ್ತು ಕೆಲಸಕೆ ಬರಲಿಲ್ಲಾ, ಮಠದ ಬದುಕಿಗೊಂದು
> ಗುರಿಯಿದೆ, ದಿನನಿತ್ಯದ ಪರಿಪಾಠವಿದೆ. ನನ್ನ ಬಟ್ಟೆ ನಾನೇ
> ತೊಳೆದುಕೊಳ್ಳುತ್ತಿದ್ದೆ, ನಸುಕಿಗೇ ಏಳುತ್ತಿದ್ದೆ, ಗಿಡಗಳಿಗೆ ನೀರುಣಿಸುತ್ತಿದ್ದೆ,
> ಕೊಟ್ಟಿಗೆ ಸಾರಿಸುತ್ತಿದ್ದೆ. ಇದೆಲ್ಲದರ ಜೊತೆಗೆ ಕಲಿಯುತ್ತಿದ್ದೆ.
> ಇಂಜಿನಿಯರಿಂಗ್ ವಿದ್ಯಾರ್ಥಿಯಾಗಿದ್ದಾಗ ಕೂಡ ಇದೆಲ್ಲಾ ಮಾಡಿದ್ದೇನೆ ನಾನು."[೨೬]

ಎಂದು ತನ್ನ ಮದುವೆಯ ಹಿಂದಿನ ಜೀವನದ ಅನುಭವಗಳನ್ನು ತಿಳಿಸಿದ. ಇಲ್ಲಿ ಅವನಿಗೆ ಸ್ವಾಭಿಮಾನ, ಸ್ವಪ್ರತಿಷ್ಠ, ಸ್ವಾವಲಂಬನೆ ಎಲ್ಲವೂ ಧಾರಾಳವಾಗಿ ಸಿಕ್ಕಿತ್ತು. ಇಂಥ ವ್ಯಕ್ತಿ ಮೌಲ್ಯಗಳಿಗೆ ಮದುವೆಯ ಹೆಸರಿನಲ್ಲಿ ಬಂದಂತಹ ಪರಾವಲಂಬನೆ, ಅಧೀನತೆ ಹಿಂಸೆಯನ್ನು ತಂದುಕೊಟ್ಟಿತು.

"ಮದುವೆಯೇ ಉನ್ಮಾದವಾಯಿತು. ನಿನ್ನ ಮನೆ, ಅಂತಸ್ತು,
ಚೆಲುವಿಗೆ, ನಿರ್ಭಿಡೆಯ ಮಾತುಗಳು ಎಲ್ಲವೂ ನನಗೆ
ಹೊಸದು. ಎಲ್ಲವೂ ನಿಲುಕಲಾರದ್ದು. ನಿಲುಕಿಸಿಕೊಳ್ಳುವುದಕ್ಕೆ
ಹೆಣಗಿ ಸೋತು ಹೋದೆ ನೀನು ಮಾತನಾಡಿದರೆ
ಬಾಯಿಕಟ್ಟುತ್ತಿತ್ತು. ರಮಿಸಲಿಕ್ಕೆಂದು ಕೈ ಹಚ್ಚಿದರೆ ಕೈ
ಸೆಟೆದು ನಿಲ್ಲುತ್ತಿದ್ದುವು. ದಿನೇ ದಿನೇ ಅಸಹಜನಾಗುತ್ತ ನಡೆದೆ."[1]

ಮದುವೆಯ ನಂತರ ತಾನು ಹಿಂದೆಂದೂ ಕಾಣದ ಹೊಸ ಪ್ರಪಂಚವನ್ನು ಕಂಡಾಗ ಆ ಹೊಸತನಕ್ಕೆ ಹೊಸ ಸಂಗಾತಿಯೊಂದಿಗೆ ಹೊಂದಿಕೊಳ್ಳಲಾಗದೆ ತನ್ನ ಜೀವನವನ್ನು ತಾನೇ ಅತಂತ್ರಸ್ಥಿತಿಗೆ ದೂಡುತ್ತಾನೆ. ಆಧುನಿಕ ಜಗತ್ತಿನಲ್ಲಿ ಈ ರೀತಿಯ ಅತಂತ್ರಸ್ಥಿತಿ ಸಹಜವಾದದ್ದೇ. ತಮ್ಮ ಸ್ಥಳೀಯ ಜೀವನಕ್ಕಿಂತ ಭಿನ್ನವಾದ ಜೀವನ ಪದ್ಧತಿಯೊಂದು ಹಠಾತ್ತಾಗಿ ಬಂದು ಆವರಿಸಿಕೊಂಡಾಗ ಸ್ಥಳೀಯ ಜೀವಿಗಳು ಅತಂತ್ರವಾಗುವುದು ಸಹಜವಾದದ್ದೇ. ಈ ಹೊಸ ಜೀವನ ಪದ್ಧತಿಯ ಮುಂದೆ ಸೋಲನ್ನು ಅನುಭವಿಸಿದ ಮುಗ್ಧ ಚೇತನಗಳು ಅದನ್ನು ಹೇಗಾದರೂ ಮಾಡಿ ಮಣಿಸಬೇಕೆಂದು ಹೋರಾಡುತ್ತವೆ. ಆದರೆ ಹಾಗೆ ಹಠಹಿಡಿದು ಮುನ್ನುಗ್ಗುವುದೇ ಅವರ ಅಹಂಕಾರಕ್ಕೆ ಕಾರಣವಾಗುತ್ತದೆ. ಹಾಗಾಗಿ ಗೆಲ್ಲಲು ಹೊರಡವರು ಮತ್ತಷ್ಟು ಸೋಲುತ್ತಾರೆ.

"ಸೋಲೆಂಬುದು ವಿಚಿತ್ರವಾದ ರೋಗ! ಅಹಂಕಾರಿಯಾದೆ,
ಕುಡಿಯಲಿಕ್ಕೆ ಶುರುಮಾಡಿದೆ, ನಿನಗೆ ಗೊತ್ತಿರದ ಮತ್ತೊಂದು
ಹವ್ಯಾಸವನ್ನು ಅಂಟಿಸಿಕೊಂಡಿದ್ದೆ............
ಸೂಳೆಗಾರಿಕೆ!
ನಿನ್ನನ್ನು ಮಣಿಸಲಿಕ್ಕೆ ಕಲಿತು ಬರುತ್ತೇನೆ ಎಂದುಕೊಂಡು
ಶುರುವಾದ ಹವ್ಯಾಸವದು..............ಮಣಿಸುವ ಬದಲು

ಮತ್ತಷ್ಟು ಅಸಮರ್ಥನಾದೆ.[೨೬]

ಹೀಗೆ ತನ್ನ ಹೆಂಡತಿಯನ್ನು ಮಣಿಸಲು ಹೋಗಿ ಶಿವಕುಮಾರ ತನ್ನ ಜೀವನವನ್ನು ಇನ್ನಷ್ಟು ಸಂದಿಗ್ಧತೆಯಲ್ಲಿ ಸಿಲುಕಿಸಿಕೊಂಡ. ಈ ಆಧುನಿಕ ಜಗತ್ತಿನಲ್ಲಿ ದಾಂಪತ್ಯ ಎಂಬುವುದು ಹೇಮಾ ಪಟ್ಟಣಶೆಟ್ಟಿಯವರು ಹೇಳಿದಂತೆ ಒಂದು ಸ್ಥಾವರ ವ್ಯವಸ್ಥೆ. ಅಲ್ಲಿ ಬಂದಿಯಾದ ಪ್ರತೀ ಮನುಷ್ಯನೂ ಜಂಗಮ ಬದುಕಿಗಾಗಿ ಹಾತೊರೆಯುತ್ತಾನೆ. ಇಲ್ಲಿ ಆಕೆ ಮತ್ತು ಶಿವಕುಮಾರ ಈ ಸ್ಥಾವರ ವ್ಯವಸ್ಥೆಯಿಂದ ಬಿಡುಗಡೆ ಪಡೆಯಬೇಕೆಂದು ಹೊರಟವರು. ಆದರೆ ಇಬ್ಬರ ಮಾರ್ಗಗಳು ಮಾತ್ರ ಬೇರೆ ಬೇರೆಯಾದವುಗಳು. ಆದರೆ ಇಬ್ಬರೂ ಅನೈತಿಕತೆಯಿಂದ ಸುಖ ಪಡೆಯಲು ಪ್ರಯತ್ನಿಸುತ್ತಾರೆ. ಆದರೆ ಅಲ್ಲಿಯೂ ಪಾಪ ಪ್ರಜ್ಞೆಯಿಂದ ಬೆಂದು ಹಿಂದಕ್ಕೆ ಮರಳುವ ಪ್ರಯತ್ನ ಮಾಡುತ್ತಾರೆ.

ಈ ನಾಟಕದಲ್ಲಿ ಮನುಷ್ಯನ ಮೂಲ ಪ್ರವೃತ್ತಿಯಲ್ಲೊಂದಾದ ಲೈಂಗಿಕ ವ್ಯಾಪಾರವನ್ನು ಶೋಧಿಸುವ ಪ್ರಯತ್ನವಿದೆ. ಗಂಡು-ಹೆಣ್ಣಿನ ಪರಸ್ಪರ ತಾಕಲಾಟದಲ್ಲಿ ಒಂದು ಮತ್ತೊಂದನ್ನು ಮೀರಲು ಹೋಗಿ ಹಾದರದ ಸೆಳೆತಕ್ಕೆ ಒಳಗಾಗುತ್ತವೆ. ಇಬ್ಬರಲ್ಲೂ ಪಾಪಪ್ರಜ್ಞೆಯೂ ಅಗಾಧವಾಗಿದ್ದು ಅದು ಅವರನ್ನು ಕಾಡುವ ಪರಿಯನ್ನು ಬಹು ಮಾರ್ಮಿಕವಾಗಿ ಈ ನಾಟಕ ಕಟ್ಟಿಕೊಡುತ್ತದೆ.

ಜಂಗಮದ ಬದುಕನ್ನು ಅರಸಿ ಹೊರಟ ಆಕೆ ಮತ್ತು ಶಿವಕುಮಾರ ನಾಟಕದ ಕೊನೆಯಲ್ಲಿ ಜಂಗಮವಾಗುತ್ತಲೇ ಸ್ಥಾವರತೆಯನ್ನು ತಲುಪುವುದು ಈ ನಾಟಕದ ವಿಶಿಷ್ಟ ಭಾಗಗಳಲ್ಲಿ ಒಂದು. ದಾಂಪತ್ಯದ ಯಾವ ಜಂಜಾಟಗಳು, ತಾಕಲಾಟಗಳು, ಅಸಹಜತೆ, ಅತಂತ್ರತೆ ಯಾವುದೂ ಬೇಡವೆಂದು ಇಂಗ್ಲೆಂಡಿಗೆ ಹೋದ ಆಕೆ ಮತ್ತು ಈ ದ್ಹಾಂಪತ್ಯದ ಸಂಘರ್ಷಣೆ ಹಾಗು ವಿಘಟನೆಯಿಂದ ಬೇಸತ್ತಿದ್ದ ಶಿವಕುಮಾರ ನಾಟಕದ ಕೊನೆಯಲ್ಲಿ ಒಟ್ಟಿಗೇ ಹೊರಡುತ್ತಾರೆ. ಅದೂ ಏಕಾಂತ ಬಯಸಿ ಅಲ್ಲ, ರಾಶಿ ರಾಶಿ ಜನರಿರುವ ಕಡೆಗೆ ಹೊರಡುತ್ತಾರೆ. ಹಿಂದೆ ತಾವು ಯಾವ ಜೀವನವನ್ನು ನಿರಾಕರಿಸಿ ಹೊರಟಿದ್ದರೋ ಅದೇ ಬದುಕನ್ನು ಈಗ ಅಪೇಕ್ಷಿಸುತ್ತಾ ಹೊರಡುತ್ತಾರೆ. ಮಕ್ಕಳೊಂದಿಗೆ ಮಕ್ಕಳಾಗಲು ಹೊರಡುತ್ತಾರೆ.

ಕೊನೆ ಟಿಪ್ಪಣಿ :

೧. ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ, ೨೦೦೧ - ಪುಟ - ೧೫

೨. ಅದೇ ಪುಟ - ೨೦

೩. ಅದೇ ಪುಟ - ೬

೪. ಅದೇ ಪುಟ - ೧೬

೫. ಪ್ರಸನ್ನ : ಡಾ.ಹೇಮಾ ಪಟ್ಟಣಶೆಟ್ಟಿ : ಕರ್ನಾಟಕ ನಾಟಕ ಅಕಾಡೆಮಿ : ೨೦೦೦

೬. ಅದೇ ಪುಟ - ೫೮

# ಅಧ್ಯಾಯ-೬

## ಧರ್ಮದ ರಾಜಕಾರಣ : 'ಉಲಿ'

"ಧರ್ಮಗಳು ತಾಯಿಯಂತೆ ಪೊರೆಯುವ ಬಾಂಬಿನಂತೆ ನಾಶಮಾಡುವ ಎರಡೂ ಪಾತ್ರಗಳನ್ನು ನಿರ್ವಹಿಸಿಕೊಂಡು ಬಂದಿರುವುದನ್ನು ಚರಿತ್ರೆಯನ್ನ ಕಂಡರೂ ತಿಳಿಯುತ್ತದೆ ವರ್ತಮಾನವನ್ನು ಕಂಡರೂ ತಿಳಿಯುತ್ತದೆ."[1] ಧರ್ಮಗಳು ಜನಸಮುದಾಯವನ್ನು ತನ್ನ ಕೇಂದ್ರದಲ್ಲಿರಿಸಿಕೊಂಡು ನಾಯ, ನೀತಿ, ಸತ್ಯ ಅಹಿಂಸೆಗಳೆಂಬ ಮೂಲ ಮಂತ್ರದಿಂದ ನೈತಿಕ ಪಥದಲ್ಲಿ ಚಲಿಸುವಂತೆ ಪ್ರೇರೇಪಿಸುತ್ತದೆ. ಮನುಷ್ಯನಲ್ಲಿ ತುಂಬಿರುವ ಸ್ವಾರ್ಥ, ಕ್ರೋಧ, ಅಸೂಯೆ ಮುಂತಾದ ಭಾವನೆಗಳನ್ನು ನಿಯಂತ್ರಣದಲ್ಲಿರಿಸಿ ಮಾನವೀಯ ಮಾರ್ಗದಲ್ಲಿ ನಡೆಸುವ ಮಹತ್ತರ ಕೆಲಸ ಮಾಡುತ್ತವೆ. ಆ ಮೂಲಕ ಇಡೀ ಲೋಕದಲ್ಲಿ ಶಾಂತಿ ನೆಲೆಸುವಂತೆ ಮಾಡುತ್ತವೆ. ಹಾಗಾಗಿಯೇ ಧರ್ಮವನ್ನು ಉಪನಿಷತ್‌ನಲ್ಲಿ "ಧರ್ಮ ವಿಶ್ವಸ್ಯಪ್ರತಿಷ್ಠಾ"[2] ಎಂದು ಕರೆಯಲಾಗಿದೆ. ಅಂದರೆ ಧರ್ಮ ಒಂದು ಉತ್ತಮ ವಿಶ್ವವನ್ನು ಪ್ರತಿಷ್ಠಾಪಿಸಲು ಆಧಾರ ಸ್ತಂಭವಾಗಿ ನಿಲ್ಲುತ್ತದೆ ಎಂದು ಸಾರಲಾಗಿದೆ.

ಧರ್ಮದ ಇಂಥ ನ್ಯಾಯ, ನೀತಿ, ಸತ್ಯ, ಅಹಿಂಸೆಗಳೆಂಬ ಹಲವಾರು ನೈತಿಕ ಭೋದನೆಗಳ ಹಿಂದೆ ಬಹಳ ದೊಡ್ಡ ಭೌದ್ಧಿಕ ರಾಜಕಾರಣವು ಅಡಗಿರುವುದನ್ನು ನಾವು ಮರೆಯಬಾರದು. ಧರ್ಮ ಲೋಕದಲ್ಲಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ನ್ಯಾಯ-ಅನ್ಯಾಯ, ನೀತಿ-ಅನೀತಿ, ಸತ್ಯ-ಅಸತ್ಯ, ಹಿಂಸೆ-ಅಹಿಂಸೆ, ಪಾಪ-ಪುಣ್ಯಗಳೆಂಬ ಅವಳೀ ವೈರುಧ್ಯಗಳನ್ನು ತಾನೇ ಸೃಷ್ಟಿಸಿ ಜನಸಮುದಾಯದ ಭೌದ್ಧಿಕ ಪ್ರಜ್ಞೆಯನ್ನು ನಿಯಂತ್ರಿಸುತ್ತದೆ. ಆ ಮೂಲಕ ಜನಸಮುದಾಯವನ್ನು ಭೌದ್ಧಿಕ ಗುಲಾಮರನ್ನಾಗಿ ಮಾಡಿಕೊಂಡು ಎಲ್ಲರ ಮೇಲೆ ತನ್ನ ಅಧಿಪತ್ಯವನ್ನು ಸ್ಥಾಪಿಸುತ್ತದೆ.

ಆಧುನಿಕ ಯುಗದಲ್ಲಿ ಧರ್ಮದ ಇಂಥ ಪ್ರಾಬಲ್ಯದಿಂದ ಬಿಡಿಸಿಕೊಳ್ಳಲು ಹಲವಾರು ಪ್ರಯತ್ನಗಳು ನಡೆದಿವೆ ಮತ್ತು ನಡೆಯುತ್ತಲೇ ಇವೆ. ಇಂದಿಗೂ ಧರ್ಮದ ತೆಕ್ಕೆಯಿಂದ ಬಿಡಿಸಿಕೊಳ್ಳಲು ಸಾಧ್ಯವಾಗದೇ ಇರುವಂತಹದ್ದೊಂದು ವಿಪರ್ಯಾಸ. ಆದರೆ ಧರ್ಮದ ಭೌದ್ಧಿಕ ಗುಲಾಮಗಿರಿಯಿಂದ ಬಿಡಿಸಿಕೊಳ್ಳಬೇಕೆಂದು ಹೊರಟ ಆಧುನಿಕ ಯುಗ ಧರ್ಮದ ನೈತಿಕ ಮಾರ್ಗವನ್ನೇ ಬಿಟ್ಟು ಬಹಳ ದೂರ ನಡೆದಿದೆ. ಆಧುನಿಕ ಯುಗದಲ್ಲಿ ಮನುಷ್ಯ ತನ್ನ ಸ್ವಾರ್ಥ ಸಾಧನೆಗಾಗಿ ಹಲವಾರು ಅನ್ಯೆತಿಕ

ಪ್ರಸನ್ನ ಅವರು ತಮ್ಮ 'ದೇಸಿ ಜೀವನ ಪದ್ಧತಿ' ಎಂಬ ಕೃತಿಯಲ್ಲಿ 'ಅಸಹಜ ಬದುಕು' ಎಂಬ ಭಾಗದಲ್ಲಿ ವರ್ಣದ ಬಗೆಗೆ ತಿಳಿಸುತ್ತಾ 'ನಮ್ಮ ಆಂತರಿಕ ಕೊಳಕುತನ ಹೆಚ್ಚಾದಷ್ಟು ಬಾಹ್ಯದಲ್ಲಿ ಬಿಳುಪಿನ ಪ್ರದರ್ಶನ ಹೆಚ್ಚುತ್ತದೆ.'[೩] ಎಂದು ಅವರ ಸ್ನೇಹಿತರು ಆಡಿದ ಮಾತುಗಳನ್ನು ನೆನೆಯುತ್ತಾರೆ. ಈ ಮಾತು ವಿದ್ಯಾಪತಿಯ ಜೀವನದಲ್ಲಿಯೂ ಅಷ್ಟೇ ಸತ್ಯವಾದದ್ದು. ಅವನೂ ಸಹ ತನ್ನ ಸಂಪತ್ತಿನಿಂದ ಉತ್ತಮ ಬಂಗಲೆ, ಕಾರು, ಐಶಾರಾಮಿ ವಸ್ತುಗಳನ್ನು ತನ್ನ ಸುತ್ತ ಪ್ರತಿಷ್ಠಾಪಿಸಿದ್ದಾನೆ. ಇವುಗಳು ಅವನ ಪ್ರತಿಷ್ಠೆಯ ಪ್ರತೀಕಗಳಾಗಿದ್ದರೂ ಅದರ ಹಿಂದೆ ಒಂದು ದೊಡ್ಡ ಹುನ್ನಾರವೇ ಅಡಗಿದೆ ಇವನ ಇಂಥ ವರ್ತನೆಯನ್ನು ನಾವು ಗೋಮುಖವ್ಯಾಘ್ರತನ ಎಂದೇ ಕರೆಯಬಹುದಾಗಿದೆ. ಇದನ್ನ ನಾಟಕದ ಸೂತ್ರದಾರನ ಮಾತುಗಳಲ್ಲಿಯೇ ಗಮನಿಸಬಹುದು.

"ಅಮೃತ ಶಿಲೆಯಿಂದ ಕಟ್ಟಿದ ಬೃಹತ್ ಅತಿರೇಕ ಅನ್ನಬಹುದು ಇದನ್ನ;
ಮನೆಯ ಹೊರಗೂ ಹೊರಗಿನಂತಿಲ್ಲ, ಒಳಗೂ ಒಳಗಿನಂತಿಲ್ಲ.
ಗೋಡೆಗಳ ಮೇಲೆ ಕಪಾಟಿನ ಗಾಜಿನೊಳಗೆ ಗಾಂಧೀಜಿ, ನೆಹರು
ಚಿತ್ರಗಳಿಂದ ಹಿಡಿದು ಸಿನಿಮಾ ನಟರುಗಳವರೆ ಎಲ್ಲರೂ ಇದ್ದಾರೆ.
ದೇವತೆಗಳ ಪ್ಲಾಸ್ಟರ್ ಮೂರ್ತಿಗಳಿಂದ ಹಿಡಿದು ಬಂಗಾರದ ಮೆರುಗಿನ
ಅಲಂಕಾರಿಕ ವಸ್ತುಗಳವರೆಗೆ ಎಲ್ಲಾ ಹರಡಿಬಿಟ್ಟಿದೆ.
ನಡುನಡುವೆ ವಿದ್ಯಾಪತಿಗಳು ಪ್ರಮುಖರೊಟ್ಟಿಗೆ ಕೈಕುಲುಕುತ್ತಾ
ನಗೆಬೀರುತ್ತಿರುವ ಚಿತ್ರಗಳು ದಾರಾಳವಾಗಿವೆ. ಮನೆಯ
ಪೀಠೋಪಕರಣಗಳು ಸಮಸ್ತವೂ ಹೊಸದಾಗಿ ಹೊಳಪಾಗಿ ಉಳಿದು
ನವ ಶ್ರೀಮಂತಿಕೆ ಅಟ್ಟಹಾಸವನ್ನ ಸೂಸುತ್ತಿವೆ."[೪]

ಇಲ್ಲಿ ವಿದ್ಯಾಪತಿ ಜನರ ಕಣ್ಣೊರೆಸಲು ತಾನೊಬ್ಬ ಸಭ್ಯಸ್ಥ ಎಂದು ತೋರಿಸಿಕೊಳ್ಳಲು ತನ್ನ ಹಣದಿಂದ ಎಲ್ಲವೂ ಪಾರದರ್ಶಕವಾದದ್ದು ಎಂದು ಪ್ರದರ್ಶಿಸುತ್ತಿದ್ದಾನೆ. ಆದರೆ ಇದಾವುದೂ ಸತ್ಯವಲ್ಲ. ನೆಹರು, ಗಾಂಧಿ, ಸಿನಿಮಾ ನಟರುಗಳ ಭಾವಚಿತ್ರಗಳು ಮತ್ತು ಹಲವಾರು ಪ್ರಮುಖರೊಂದಿಗೆ ನಿಂತ ಭಾವಚಿತ್ರಗಳು ಅವನ ಪ್ರಸಿದ್ಧಿಯನ್ನು ತಿಳಿಸುತ್ತಿದ್ದರು. ಅವುಗಳ ಹಿಂದೆ ಅಡಗಿರುವ ಸತ್ಯವನ್ನು ಹುಡುಕಲು ನಮಗೆ ಪ್ರೇರೇಪಿಸುತ್ತವೆ. ಅಮೃತ ಶಿಲೆಯ ಬಂಗಲೆ ಅಲ್ಲಿನ ಪೀಠೋಪಕರಣಗಳು ಎಲ್ಲವೂ ಅವನ ಶ್ರೀಮಂತಿಕೆಯನ್ನು

ಪ್ರದರ್ಶಿಸುತ್ತದ್ದರೆ, ಆ ಮೂಲಕ ಅವುಗಳಿಗೆ ಕಾರಣ ಹುಡುಕಲು ನಮ್ಮನ್ನು ಹಚ್ಚುತ್ತವೆ. ಇಲ್ಲಿ ಎಲ್ಲವೂ ನಿಗೂಢವಾಗಿವೆ. ಹಾಗಾಗಿಯೇ ಸೂತ್ರದಾರ ಹೇಳುವಂತೆ ಅವನ ಮನೆಯ ಹೊರಗೂ ಹೊರಗಿನಂತಿಲ್ಲ, ಒಳಗೂ ಒಳಗಿನಂತಿಲ್ಲ. ಅಂತೆಯೇ ಅವನ ಮನಸ್ಸೂ ಕೂಡ ಬಹಳ ನಿಗೂಢವಾದದ್ದು. ನಾಟಕದ ಕೊನೆಯವರೆಗೂ ಅದು ಬಯಲಾಗುವುದೇ ಇಲ್ಲ.

ವಿದ್ಯಾಪತಿ ಹಿಂದೆ ತನ್ನ ದಡ್ಡತನದಿಂದ ಪ್ರಹ್ಲಾದರಾವ್ ಕುಲಕರ್ಣಿಯವರಿಂದ ಅವಮಾನಿತನಾದ್ದುದ್ದಕ್ಕಾಗಿ ಅವನ ಮೂರೂ ಹೆಣ್ಣು ಮಕ್ಕಳನ್ನು ಮುಂದಿಟ್ಟುಕೊಂಡು ಹಂತ ಹಂತವಾಗಿ ಸೇಡು ತೀರಿಸಿ ಕೊಳ್ಳುತ್ತಾನೆ. ಆ ಸೇಡಿಗೆ ದಾಳವಾದ ಮೂರೂ ಹೆಣ್ಣು ಮಕ್ಕಳ ಗಮನಕ್ಕೆ ಬರದಂತೆ ಚಾಣಕ್ಷತನದಿಂದ ನೊಡಿಕೊಳ್ಳುವುದು ಅವನ ಜಾಣತನದ ಪ್ರತೀಕ. ಮೊದಲನೇ ಮಗಳು ಸರಸ್ವತಿಯನ್ನು ತನ್ನ ಪ್ರೇಮಪಾಶದ ಬಂಧನದಲ್ಲಿ ಬಂದಿಸಲು ಹೋಗಿ ವಿಫಲನಾಗುತ್ತಾನೆ. ಆದರೆ ಅವಳ ತಂಗಿ, ಪ್ರಹ್ಲಾದರಾವ್ ಕುಲಕರ್ಣಿ ಅವರ ಎರಡನೆ ಮಗಳು ಪಾರ್ವತಿಯನ್ನು ಪ್ರೇಮಿಸಿ, ಅವಳನ್ನು ವಂಚಿಸಿ ಕರೆತಂದು ತನ್ನ ಹೋಟೆಲ್ಲಿನಲ್ಲಿ ಕ್ಯಾಬರೇ ನರ್ತಕಿಯಾಗಿ ನೇಮಿಸಿಕೊಳ್ಳುತ್ತಾನೆ. ಜೊತೆಗೆ ಅವನ ಮೂರನೇ ಮಗಳು ಧನಲಕ್ಷ್ಮಿಯನ್ನು ಅಪಹರಿಸಿ ಮದುವೆಯಾಗಿ ತನ್ನ ದರ್ಪ, ಗಾಂಭೀರ್ಯ, ಅಹಂಕಾರಗಳಿಂದ ಅವಳನ್ನು ಇಂಚಿಂಚು ಕೊಲ್ಲುತ್ತಿರುತ್ತಾನೆ. ಅಷ್ಟೇ ಅಲ್ಲದೆ ಈ ಮೂರೂ ಹೆಣ್ಣು ಮಕ್ಕಳು ಒಂದೇ ಕಡೆ ಸುತ್ತುತ್ತಿದ್ದರೂ ತಾವು ಅಕ್ಕ ತಂಗಿಯರು ಎಂಬುದನ್ನು ತಿಳಿಯದಂತೆ ನೋಡಿಕೊಳ್ಳುತ್ತಾನೆ. ಇವನ ಇಂಥ ಚಾಣಾಕ್ಷತನ ಪ್ರಹ್ಲಾದರಾಯರ ಇಡೀ ಕುಟುಂಬವನ್ನು ನಾಶಮಾಡುವುದಲ್ಲದೆ ಅವರನ್ನು ಉನ್ಮತ್ತರನ್ನಾಗಿ ಮಾಡುತ್ತದೆ.

ಪ್ರಹ್ಲಾದರಾವ್ ಕುಲಕರ್ಣಿಯವರು ತಮಗಾದ ಅನ್ಯಾಯದಿಂದ ಉನ್ಮತ್ತರಾಗಿ ಹುಚ್ಚನಂತೆ ನಡೆದುಕೊಳ್ಳುತ್ತಾರೆ. ತಮ್ಮನ್ನು ತಾವು ಹುಚ್ಚು ಪ್ಯಾಲಿ ಎಂದು ಕರೆದುಕೊಳ್ಳುತ್ತಾರೆ. ಇದೇ ಉನ್ಮತ್ತ ಸ್ಥಿತಿಯಲ್ಲಿ ಕಾಲೀಬಿಲ್ಲಿಯನ್ನು ಪ್ರವೇಶಿಸಿ ಅಲ್ಲಿ ನಡೆದ ಪತ್ತೇದಾರನ ಕೊಲೆಗೆ ಕಾರಣರಾಗುತ್ತಾರೆ. ನಾಟಕದುದ್ದಕ್ಕೂ ಇವರನ್ನೇ ಅಪರಾಧಿ ಎಂಬಂತೆ ತೋರಿಸಲಾಗುತ್ತದೆ. ಆದರೆ ಕೊಲೆಯಾದವನು ಪ್ರಹ್ಲಾದರಾವ್ ಕುಲಕರ್ಣಿಯವರ ಮೊದಲನೆ ಮಗಳು ಸರಸ್ವತಿಯ ಗಂಡ, ಅವರ ಅಳಿಯ. ಇವನು ಆರ್.ಪಿ. ಎಂಬ ಹೆಸರಿನಲ್ಲಿ ಪತ್ತೇದಾರಿ ಕ್ಷೇತ್ರದಲ್ಲಿ ಒಳ್ಳೆಯ ಹೆಸರು, ಪ್ರತಿಷ್ಠೆಗಳನ್ನು ಸಂಪಾದಿಸುತ್ತಾನೆ. ಇಂಥ ವ್ಯಕ್ತಿಯನ್ನು ಪ್ರಹ್ಲಾದರಾವ್ ಕೊಲೆ ಮಾಡುವುದು ಅಸಂಭವ. ಆದರೆ ಕಾಲಿಬಿಲ್ಲಿಯಲ್ಲಿ ನಡೆಯುತ್ತಿದ್ದ ಅಕ್ರಮ ಸಾಗಾಣಿಕೆಗಳ ಬಗೆಗೆ ಪತೇದಾರಿ ನಡೆಸುತ್ತಿದ್ದ ಆರ್.ಪಿ.ಯನ್ನು ವಿದ್ಯಾಪತಿಯೇ ಕೊಲೆ ಮಾಡಿರಬಹುದಂಬ ಅನುಮಾನ

ಓದುಗರ ತಲೆಯನ್ನು ಹೊಕ್ಕುತ್ತದೆ.ಈ ಅನುಮಾನಗಳಿಗೆ ಪ್ರಸನ್ನ ಅವರು ತಮ್ಮ ನಾಟಕದ ಯಾವುದೇ ಭಾಗದಲ್ಲಿಯೂ ಸ್ಪಷ್ಟ ಉತ್ತರ ನೀಡುವುದೇ ಇಲ್ಲ. ಇದು ಅವರ ಪತ್ತೇದಾರಿ ನಾಟಕ ರಚನೆಯ ಉತ್ಕೃಷ್ಟ ವೈಖರಿ ಎಂದೇ ಹೇಳಬಹುದು.

ಹೀಗೆ ಕಾಲಿಬಿಲ್ಲಿಯಲ್ಲಿ ನಡೆದ ಪತ್ತೇದಾರನ ಕೊಲೆಯ ದಾರಿ ತಪ್ಪಿಸಲೆಂದೇ ಪ್ರಸನ್ನ ಒಂಭತ್ತನೇ ಶತಮಾನದ ನಿಷಿದ್ಧ ಗ್ರಂಥವನ್ನು, ಅಲ್ಲಿನ ನಂಬಿಕೆಯನ್ನೂ ಬಳಸಿಕೊಂಡಂತೆ ಕಾಣುತ್ತದೆ. ಹಿಂದೂ ಶಾಸ್ತ್ರಗಳ ಪ್ರಕಾರ ವೇದಗಳು ಶೃತಿ ಮತ್ತು ಸ್ಮೃತಿ ಮಾತ್ರವಾಗಿದ್ದವು. ಇವುಗಳನ್ನು ಬರೆದಿಡುವುದು ಅಕ್ಷಮ್ಯ ಅಪರಾಧವಾಗಿದ್ದಿತು. ಹಾಗೆ ಯಾರಾದರೂ ಅವುಗಳನ್ನು ಬರೆದಿಟ್ಟದ್ದೇ ಆದರೆ ಅವರನ್ನು ಧರ್ಮ ದ್ರೋಹಿಗಳು ಎಂದು ಕರೆಯಲಾಗುತ್ತಿತ್ತು. ಹಾಗೇಯೇ ಆ ಗ್ರಂಥವನ್ನು ನಿಷಿದ್ಧ ಗ್ರಂಥ ಎಂದು ಕರೆದು ಅದನ್ನು ನಾಶಮಾಡಲಾಗುತ್ತಿತ್ತು. ಹಿಂದೂ ಧರ್ಮದ ಇಂಥ ನಂಬಿಕೆಗಳನ್ನು ರಾಮಾವತಾರ ಶಾಸ್ತ್ರಿಗಳು ಮುಂಬೈನಂಥ ನಗರದಲ್ಲಿದ್ದರೂ ಚಾಚೂತಪ್ಪದೆ ಪಾಲಿಸುತ್ತಿದ್ದರು. ಆದರೆ ಪರಂಪರಾಗತವಾಗಿ ಶಾಸ್ತ್ರಗ್ರಂಥಗಳ ಸಂಗ್ರಹಣೆಯಲ್ಲಿ ತೊಡಗಿದ್ದ ಇವರಿಗೆ ಆಕಸ್ಮಿಕವಾಗಿ ಒಂಭತ್ತನೇ ಶತಮಾನದಲ್ಲಿ ರಚಿತವಾದ ಋಗ್ವೇದದ ತಾಳೆಗರಿ ಸಿಗುತ್ತದೆ. ಇದನ್ನು ಎಲ್ಲಾ ಗ್ರಂಥಗಳಂತೆ ತಮ್ಮ ಜೊತೆ ಇಟ್ಟುಕೊಳ್ಳುವುದು ತಪ್ಪು ಎಂದು ಭಾವಿಸುತ್ತಾನೆ. ಆದರೂ ಅದು ಒಂದು ಗ್ರಂಥ ಎಂಬ ಕಾರಣಕ್ಕೆ ನಾಶಮಾಡಲು ಇಚ್ಚಿಸುವುದಿಲ್ಲ. ಹಾಗಾಗಿಯೇ ಅದನ್ನು ಯಾರಿಗೂ ತಿಳಿಯದಂತೆ ತನ್ನ ಕೋಣೆಯ ಕಪಾಟಿನಲ್ಲಿ ಇಟ್ಟು ಬೀಗ ಹಾಕುತ್ತಾನೆ. ಆದರೂ ಅವರ ಸುಪ್ತ ಮನಸ್ಸಿನಲ್ಲಿ ಅದಕ್ಕಾಗಿ ಭಯ ನೆಲೆಸಿರುತ್ತದೆ. ಅದು ಹುಚ್ಚು ಪ್ಯಾಲಿ ಬಂದು ಗ್ರಂಥವನ್ನು ಕೇಳಿದಾಗ ಜಾಗೃತವಾಗುತ್ತದೆ. "ಗ್ರಂಥಗಳು ಓದಲಿಕ್ಕೆ ಇರುವುದು ಶಾಸ್ತ್ರಿಗಳೇ! ನಿಷಿದ್ಧ ಗ್ರಂಥ ಬೇರೆ! ರಸವತ್ತಾಗಿರುತ್ತೆ ಓದಿಕೊಡ್ತೀನಿ ಕೊಡಿ."[೨೫] ಎಂದು ಹೇಳಿದಾಗ ಅವನ ಅಂತರಂಗದಲ್ಲಿ ಅಡಗಿದ್ದ ಭಯ,ಆತಂಕಗಳು ಜಾಗೃತಗೊಳ್ಳುತ್ತದೆ. ಹುಚ್ಚು ಪ್ಯಾಲಿ ಹೊರಟು ಹೋದ ನಂತರ ಮಲಗಲು ಹೋದ ಶಾಸ್ತ್ರಿಗಳು ತಮ್ಮ ನಿದ್ರಾವಸ್ಥೆಯಲ್ಲಿಯೇ ಕಪಾಟಿನ ಕೀಲಿತೆಗೆದು ಗ್ರಂಥವನ್ನು ಹರಿದು ನಾಶಮಾಡಿ ತಮ್ಮ ಮನೆ ಎದುರಿನ ಚರಂಡಿಗೆ ಹಾಕಿರುತ್ತಾನೆ. ಇದು ನಾಟಕದ ಕೊನೆಯಲ್ಲಿ ಬಯಲಾದುತ್ತದೆ. ಇದನ್ನೇ ನಾವು ಧರ್ಮದ ಭೌದ್ಧಿಕ ನಿಯಂತ್ರಣ ಎಂದು ಕರೆಯುವುದು. ರಾಮಾವತಾರ ಶಾಸ್ತ್ರಿಗಳಲ್ಲಿ ತಾವು ಧರ್ಮದ ವಿರುದ್ಧವಾದ ಕೆಲಸ ಮಾಡಿದ್ದು, ಅದರಿಂದ ಅನಾಹುತವಾವುತ್ತದೆ ಎಂದು ಭಾವಿಸುತ್ತಿದ್ದರು. ಹಾಗಾಗಿಯೇ ಅವರನ್ನು ಪಾಪಪ್ರಜ್ಞೆ ಕಾಡುತ್ತಿತ್ತು. ಇದೇ ಅವರ ಮನೋ ರೋಗಕ್ಕೆ ಕಾರಣವಾಗಿರುತ್ತದೆ. ಆದರೆ ಇದ್ಯಾವುದರ ಪರಿವೆಯೂ ಇರದ ಶಾಸ್ತ್ರಿಗಳು ಹುಚ್ಚು ಪ್ಯಾಲಿಯ ಮೇಲೆ ಅನುಮಾನ ಪಡುತ್ತಾರೆ. ಜೊತೆಗೆ ಅದನ್ನು ಹುಡುಕಿ ತನಗೆ ಹಿಂದಿರುಗಿಸಬೇಕೆಂದು ಪತ್ತೇದಾರರಿಗೆ ಮನವಿಸಲ್ಲಿಸುತ್ತಾನೆ.

ರಾಮಾವತಾರ ಶಾಸ್ತ್ರಿಗಳು ನೀಡಿದ ದೂರಿನ ಜಾಡು ಹಿಡಿದು ಹೊರಟ ಚೀಫ್ ಮತ್ತು ಪತ್ತೇದಾರ ಹುಚ್ಚು ಪ್ಯಾಲಿಯನ್ನು ಬಂದಿಸುವಲ್ಲಿ ಯಶಸ್ವಿಯಾಗುತ್ತಾರೆ. ಅವನ ಬಳಿ ಇದ್ದ ಕೆಂಪು ಪೆಟ್ಟಿಗೆಯನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಆದರೆ ಅದು ಖಾಲಿಯಾಗಿದ್ದಿತು. ಅದರಲ್ಲಿ ಯಾವುದೇ ನಿಷಿದ್ಧ ಗ್ರಂಥ ಸಿಗಲಿಲ್ಲ. ಜೊತೆಗೆ ಅವನ ಹುಚ್ಚಿನ ಕಾರಣದಿಂದಾಗಿ ಅವನನ್ನು ಬಂಧಿಸುವಂತೆಯೂ ಇರಲಿಲ್ಲ. ಆದರೆ ಅವನನ್ನು ಸ್ವತಂತ್ರವಾಗಿ ಬಿಟ್ಟು, ಅವನನ್ನು ಹಿಂಬಾಲಿಸುತ್ತಾ ಸತ್ಯದ ಹುಡುಕಾಟದಲ್ಲಿ ತೊಡಗಿದರು.

ಪತ್ತೇದಾರರಿಂದ ಮುಕ್ತನಾದ ಹುಚ್ಚು ಪ್ಯಾಲಿ ಸ್ವತಂತ್ರವಾಗಿ ಬೀದಿ ಬೀದಿಯಲ್ಲಿ ಅಲೆಯುತ್ತಿದ್ದ. ಆದರೆ ಪತ್ರಿಕೆಯಲ್ಲಿ ಪ್ರಕಟವಾದ ಕೊಲೆಗಾರನ ಫೋಟೊ ನೋಡಿದಾಗ ವಿದ್ಯಾಪತಿಗೆ ಆ ಇಡೀ ಪ್ರಕರಣವು ತನ್ನ ಸ್ವಂತದ ಬದುಕಿಗೇ ಸಂಬಂಧಿಸಿದ್ದು ಎಂದು ಅರ್ಥವಾಗುತ್ತದೆ. ಹಾಗಾಗಿಯೇ ಹುಚ್ಚು ಪ್ಯಾಲಿಯ ಎರಡನೇ ಮಗಳು ಪಾರ್ವತಿ(ಡಾಲಿ)ಯ ಸಹಾಯದಿಂದ ಅವನನ್ನು ತನ್ನ ಮನೆಗೆ ಕರೆಸಿಕೊಂಡು ಕೊಲೆಮಾಡುವ ಹುನ್ನಾರವನ್ನು ಹೊಡುತ್ತಾನೆ. ತಾನೆಣಿಸಿದಂತೆಯೇ ಮನೆಗೆ ಬಂದ ಹುಚ್ಚು ಪ್ಯಾಲಿಯನ್ನು ಹಿಗ್ಗಾಮುಗ್ಗಾ ಥಳಿಸುತ್ತಾನೆ. ಅಲ್ಲಿ ಅವನ ಅಂತರಂಗದಲ್ಲಿದ್ದ ಕೊಳಕು ಹೊರಬರುತ್ತದೆ. ಹೀಗೆ ನಡೆಯುತ್ತಿರುವಾಗಲೇ ಹುಚ್ಚು ಪ್ಯಾಲಿಯನ್ನು ಹಿಂಬಾಲಿಸುತ್ತಿದ್ದ ಚೀಫ್, ಪತ್ತೇದಾರ, ರಾಮಾವತಾರ ಶಾಸ್ತ್ರಿಗಳು ಮತ್ತು ಸರಸ್ವತಿ ಅಲ್ಲಿಗೆ ಬರುತ್ತಾರೆ. ಹುಚ್ಚು ಪ್ಯಾಲಿಯನ್ನು ಕಾಪಾಡಲೆತ್ನಿಸುತ್ತಾರೆ. ಇದು ನಾಟಕದ ಅತ್ಯುತ್ತಮ ಘಟಗಳಲ್ಲಿ ಒಂದು.

ಹೀಗೆ ಒಬ್ಬರಿಗೊಬ್ಬರು ಕಾದಾಡುತ್ತಿರುವಾಗಲೇ ಹುಚ್ಚು ಪ್ಯಾಲಿ ವಿದ್ಯಾಪತಿಯನ್ನು ಆಕ್ರೋಶದಿಂದ ಕೊಲೆಮಾಡುತ್ತಾನೆ. ಅಲ್ಲಿಗೆ ಎಲ್ಲವೂ ಮುಗಿಯಿತು ಎಂದುಕೊಳ್ಳುತ್ತಿರುವಾಗಲೇ ವಿದ್ಯಾಪತಿಯ ಧರ್ಮಪತ್ನಿ ಧನಲಕ್ಷ್ಮಿಯು ತಂದೆಯ ಈ ಕೃತ್ಯದಿಂದ ಉನ್ಮತ್ತಳಾಗಿ ಅವನನ್ನೂ ಬಂದೂಕಿನಿಂದ ಗುಂಡು ಹಾರಿಸಿ ಕೊಲ್ಲುತ್ತಾಳೆ.

'ಉಲಿ' ನಾಟಕದಲ್ಲಿ ನಡೆದ ಎಲ್ಲಾ ಕೃತ್ಯಗಳು ಹಲವು ನಿಗೂಢಗಳ ಹುಡುಕಾಟದ ಜೊತೆಗೆ ಸಾರ್ವಜನಿಕ ಬದುಕಿನೊಂದಿಗೆ ಖಾಸಗೀ ಬದುಕು, ವರ್ತಮಾನದೊಂದಿಗೆ ಭೂತಕಾಲದ ತಳುಕು ಹಾಕಿಕೊಂಡು ನಡೆಯುತ್ತಿರುವುದನ್ನು ಕಾಣಬಹುದಾಗಿದೆ.

**ಕೊನೆ ಟಿಪ್ಪಣಿ :**

೧. ಧರ್ಮ : ವಿಶ್ವಕೋಶ : ಪ್ರಸ್ತಾವನೆ

೨. ಮಹಾನಾರಾಯಣೀಯ ಉಪನಿಷತ್ ೨೨-೧ : ಉಲ್ಲೇಖ : ಧರ್ಮ : ವಿಶ್ವಕೋಶ :
ಧರ್ಮದ ಲಕ್ಷಣಗಳು : ಪುಟ -೧೫

೩. ದೇಸಿ ಜೀವನ ಪದ್ಧತಿ : ಪ್ರಸನ್ನ : ಒಂಟಿದನಿ ಪ್ರಕಾಶನ : ೨೦೦೫, ಪುಟ – ೧೯

೪. ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ, ೨೦೦೧ – ಪುಟ – ೨

೫. ಅದೇ ಪುಟ – ೨೧

# ಸಮಾರೋಪ

"ಪ್ರಸನ್ನ ಅವರ ನಾಟಕಗಳಲ್ಲಿ ಶಕ್ತಿರಾಜಕಾರಣದ ನೆಲೆಗಳು" ಎಂಬ ಈ ವಸ್ತು ನಿಷ್ಠ ಅಧ್ಯಯನವನ್ನು ಅವಲೋಕಿಸಿ ನೋಡಿದಾಗ ಪ್ರಸನ್ನ ಅವರ 'ತದ್ರೂಪಿ', 'ದಂಗೆಯ ಮುಂಚಿನ ದಿನಗಳು', 'ಮಹಿಮಾಪುರ', 'ಜಂಗಮದ ಬದುಕು', 'ಉಲಿ' ನಾಟಕಗಳಲ್ಲಿ ಸರ್ವಾಧಿಕಾರ, ವಸಾಹತುಶಾಹಿ, ಪುರೋಹಿತಶಾಹಿ, ಧರ್ಮ, ದೇವರು, ಜಾತಿ, ಪುರುಷಾಧಿಕಾರ ಹಾಗೂ ಜ್ಞಾನಾಧಿಕಾರಗಳಂಥ ವಿವಿಧ ಅಧಿಕಾರಕೇಂದ್ರಗಳು ಸಮಾಜದಲ್ಲಿ. ತಮ್ಮದೇ ಆದ ಶಕ್ತಿರಾಜಕಾರಣವನ್ನು ಸ್ಥಾಪಿಸಿರುವುದು ಕಂಡುಬರುತ್ತದೆ. ಅದಕ್ಕೆ ಪ್ರತಿಯಾಗಿ ಹಲವಾರು ಸ್ಥಳೀಯ ಜನಸಮುದಾಯ ಒಡ್ಡುವ ಪ್ರತಿರೋಧದ ವಿಭಿನ್ನ ಮುಖಗಳನ್ನು ಇಲ್ಲಿ ಪರಿಶೀಲಿಸಿರುವುದು ಕಂಡು ಬರುತ್ತದೆ.

'ತದ್ರೂಪಿ' ನಾಟಕದಲ್ಲಿ ಚಾರಿತ್ರಿಕ ಸಂದರ್ಭವೊಂದರ ಸರ್ವಾಧಿಕಾರಿ ಪ್ರಭುತ್ವದ ನಿರಂಕುಶ ಆಡಳಿತ, ಉಗ್ರರಾಷ್ಟ್ರೀಯತೆ, ಏಕಸ್ವಾಮ್ಯತೆ, ದಬ್ಬಾಳಿಕೆ, ಹಿಂಸೆ ಮತ್ತು ಅದಕ್ಕೆ ಪ್ರತಿಯಾಗಿ ಸ್ಥಳೀಯ ಜನಸಮುದಾಯದ ಸುಪ್ತ ಹಾಗೂ ನೇರ ಪ್ರತಿಭಟನೆ, ಹೋರಾಟ, ಚಳುವಳಿ ಮುಂತಾದ ತಂತ್ರ-ಪ್ರತಿತಂತ್ರಗಳ ರಾಜಕಾರಣದ ಸ್ವರೂಪಗಳು ಕಂಡುಬರುತ್ತದೆ. ಹೀಗೆ ಇಲ್ಲಿ ಚರಿತ್ರೆಯ ವಸ್ತುವೊಂದನ್ನು ಇಟ್ಟುಕೊಂಡು ಸಮಕಾಲೀನ ವಾಸ್ತವತೆಯ ಕಠೋರ ಸತ್ಯಗಳನ್ನು ಮಂಡಿಸುತ್ತಿರುವ ಪ್ರಸನ್ನ ಅವರು ಸರ್ವಾಧಿಕಾರಿ ಧೋರಣೆಗಳನ್ನು ಪ್ರಶ್ನಿಸುತ್ತಿರುವುದು ಕಂಡು ಬರುತ್ತದೆ. ಜೊತೆಗೆ ಸರ್ವಾಧಿಕಾರಿಯೊಬ್ಬನ ಆಂತರಿಕ ತಾಕಲಾಟಗಳನ್ನು ಬಿಂಬಿಸುವ ಪ್ರಯತ್ನ ಈ ನಾಟಕದಲ್ಲಿ ಮಾಡಲಾಗಿದೆ.

'ದಂಗೆಯ ಮುಂಚಿನ ದಿನಗಳು' ನಾಟಕದಲ್ಲಿ ಹತ್ತೊಂಬತ್ತನೆ ಶತಮಾನದ ಮಧ್ಯಭಾಗದಲ್ಲಿ ಭಾರತದ ರಾಜಕೀಯ ಆಗು-ಹೋಗುಗಳನ್ನು, ಶಿಥಿಲತೆಗಳನ್ನು, ದೌರ್ಬಲ್ಯಗಳನ್ನು ಚಿತ್ರಿಸುವುದರ ಮೂಲಕ ಸಮಕಾಲೀನ ರಾಜಕೀಯ ಆಗು-ಹೋಗುಗಳಿಗೆ ಕನ್ನಡಿ ಹಿಡಿದಿರುವ ಅಂಶ ಕಂಡುಬರುತ್ತದೆ. ವಸಾಹತುಶಾಹಿ ಆರಂಭದ ದಿನಗಳಲ್ಲಿ ದೇಶೀ ರಾಜರುಗಳ ಆಂತರಿಕ ದೌರ್ಬಲ್ಯಗಳನ್ನು ಬಳಸಿಕೊಂಡು ವಸಾಹತುಶಾಹಿ ಪ್ರಭುತ್ವವು ಸ್ಥಳೀಯ ಜಗತ್ತಿನ ಮೇಲೆ ಅಧಿಕಾರ ಸ್ಥಾಪಿಸಿದ್ದು ಮತ್ತು ದೌರ್ಜನ್ಯಗಳ ಮೂಲಕ ನಿಯಂತ್ರಣ ಸಾಧಿಸಲು ಯತ್ನಿಸಿದ್ದು, ಇದಕ್ಕೆ ಪ್ರತಿಯಾಗಿ ಸ್ಥಳೀಯ ಜನಸಮುದಾಯದ ನೇರ ಸಂಘರ್ಷಕ್ಕೆ ಇಳಿದುದರ ಭಾರತದ ಸ್ವತಂತ್ರ ಪೂರ್ವದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟಿನ ಸಂದರ್ಭವನ್ನು ಈನಾಟಕ ಕಟ್ಟಿಕೊಟ್ಟಿದೆ.

'ಮಹಿಮಾಪುರ' ನಾಟಕ ನಮ್ಮ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಗಳಲ್ಲಿನ ಮೌಢ್ಯ, ಕಪಟ, ಭ್ರಷ್ಟತೆ, ಜಾತಿ ವ್ಯವಸ್ಥೆ ಮುಂತಾದವುಗಳನ್ನು ವಿಶ್ಲೇಷಿಸುತ್ತದೆ. ಆಧುನಿಕ ಸಂದರ್ಭದಲ್ಲಿ ಸಾಮಾಜಿಕ ಅಭಿವೃದ್ಧಿಗೆ ಕಂಟಕವಾದ ಧಾರ್ಮಿಕ ಶೋಷಣೆ, ಜಾತೀಯತೆ, ಮೂಡನಂಬಿಕೆಗಳು ನಿರ್ಮೂಲನವಾಗುವ ಬದಲು ಅವುಗಳನ್ನೇ ತಮ್ಮ ಅಭಿವೃದ್ಧಿಯ ಮೆಟ್ಟಿಲನ್ನಾಗಿ ಮಾಡಿಕೊಂಡ ಸ್ವಾರ್ಥ ಪುರೋಹಿತಶಾಹಿ ವ್ಯವಸ್ಥೆಯ ಸಂಚಿನರಾಜಕಾರಣವನ್ನು ಸಮಾಜದಲ್ಲಿ ತನ್ನದೇ ಆದ ಪ್ರಬಲ ಅಧಿಪತ್ಯ ಸ್ಥಾಪಿಸಿರುವುದರ ಚಿತ್ರಣ ಈ ನಾಟಕದಲ್ಲಿ ಅಭಿವ್ಯಕ್ತಗೊಂಡಿದೆ.

'ಜಂಗಮದ ಬದುಕು' ನಾಟಕವು ಗಂಡು-ಹೆಣ್ಣಿನ ಸಂಬಂಧದ ವಿಷಮ ದಾಂಪತ್ಯದ ಆಕರ್ಷಣೆ, ವಿಕರ್ಷಣೆಯನ್ನು ವಿವರಿಸುತ್ತದೆ. ಜೊತೆಗೆ ದಾಂಪತ್ಯದ ವಿಘಟನೆ ಹಾಗೂ ವ್ಯಕ್ತಿಯ ವ್ಯಕ್ತಿತ್ವದ ವಿಘಟನೆಯ ಚಿತ್ರಣವು ಈ ನಾಟಕದಲ್ಲಿ ಕಂಡುಬಂದಿದೆ. ಸ್ತ್ರೀ ಸ್ವಾತಂತ್ರ್ಯತೆ, ಸಮಾನತೆಯ ಕಾಳಜಿಯೊಂದಿಗೆ ಹೆಣ್ಣಿನ ಹೊಸ ಬಗೆಯ ವಿಮೋಚನೆಯ ಪ್ರಯತ್ನ ಇಲ್ಲಿದೆ. ಆ ಕುರಿತ ಪುರುಷ ಜಗತ್ತಿನ ಆಂತರಿಕ ತೊಳಲಾಟ, ಅಸಹಾಯಕತೆ ಮೊದಲಾದ ವೈಯಕ್ತಿಕ ಹಾಗೂ ಸಾಮಾಜಿಕ ಚಿತ್ರಣವನ್ನು ಈ ನಾಟಕ ಕಟ್ಟಿಕೊಡುತ್ತದೆ. ಆಧುನಿಕೋತ್ತರ ಸಂದರ್ಭದಲ್ಲಿ ಹೆಣ್ಣು ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಅನೇಕ ಸೌಲಭ್ಯಗಳನ್ನು ಪಡೆಯುತ್ತಿರುವುದರಿಂದ ಸ್ತ್ರೀ ಸ್ವತಂತ್ರ್ಯತೆ, ಸಮಾನತೆ, ಸಾಂಪ್ರದಾಯಿಕ ಚೌಕಟ್ಟಿನಿಂದ ಬಿಡುಗಡೆ ಹೊಂದಿ ಸ್ವಂತ ಅಸ್ತಿತ್ವವನ್ನು ಕುರಿತು ಆಲೋಚಿಸುವಂತಾಯಿತು. ಆತ್ಮಾವಲೋಕನಕ್ಕೆ ಒಳಗಾದ ಹೆಣ್ಣು ಸಾಂಪ್ರದಾಯಿಕ ಸಂಕೋಲೆಗಳನ್ನು ಕಳಚಿಕೊಂಡು ವೈಚಾರಿಕವಾಗಿ ಬೆಳೆಯುವಂತಾಯಿತು. ಈ ಬಗೆಯ ಆಧುನಿಕ ಮಹಿಳೆಯ ಸರ್ವತೋಮುಖ ಬೆಳವಣಿಗೆಯ ಆಶಯಗಳನ್ನು ಈ ನಾಟಕದ ವಸ್ತುವಾಗಿರಿಸಿಕೊಂಡು ಚರ್ಚಿಸುತ್ತದೆ. ಒಂದು ಕಡೆ ಸಂಪ್ರದಾಯ ಮತ್ತು ಆಧುನಿಕತೆಗಳ ಅನ್ಯೋನ್ಯತೆ ಬದುಕಿಗೆ ಮುಖ್ಯ ಎಂದು ಹೇಳಿದರೆ ಮತ್ತೊಂದು ಕಡೆ ಜಂಗಮ ಶೀಲತೆಯೇ ನಿಜವಾದ ಬದುಕು ಎಂಬ ಆಶಯವನ್ನು ಪ್ರಸನ್ನ ಅವರು ಇಲ್ಲಿ ವ್ಯಕ್ತಪಡಿಸಿದ್ದಾರೆ. ಮನಃಶಾಸ್ತ್ರ ಮತ್ತು ಅಸ್ತಿತ್ವವಾದದ ಹಿನ್ನೆಲೆಯಲ್ಲಿಯೂ ಈ ನಾಟಕವನ್ನು ವಿಶ್ಲೇಷಿಸಿಕೊಳ್ಳಬಹುದಾಗಿದೆ.

'ಉಲಿ' ನಾಟಕದಲ್ಲಿ ಆಧುನಿಕ ಯುಗದ ವಿಕೃತ ಮನುಷ್ಯನ ಬಾಹ್ಯ ವರ್ತನೆಗಿಂತ ಆಂತರಿಕ ಬದುಕು ಎಷ್ಟು ಬಿನ್ನ ಎಂದು ವ್ಯಕ್ತಪಡಿಸುತ್ತಲೇ ಬದುಕಿನ ಹಲವಾರು ನೈಜ ಸತ್ಯಗಳನ್ನು ತಿಳಿಸುತ್ತಿದೆ. ನಾಟಕ ಪತ್ತೇದಾರಿ ಮಾದರಿಯನ್ನು ಅನುಸರಿಸಿದ್ದರೂ ಅದರ ಹಿನ್ನೆಲೆಯಲ್ಲಿ ಗಂಭೀರವಾದ ತಾತ್ವಿಕ ಚಿಂತನೆಗಳು

ಇರುವುದು ಗಮನಿಸಬೇಕಾದ ಅಂಶ. ಮನುಷ್ಯನ ಅಸ್ತಿತ್ವದ ಅಮೂರ್ತ ನೆಲೆಗಳನ್ನು ಅನ್ವೇಷಿಸುವ ಪ್ರಯತ್ನವನ್ನು ಪ್ರಸನ್ನ ಈ ನಾಟಕದಲ್ಲಿ ಮಾಡಿದ್ದಾರೆ.

ಒಟ್ಟಿನಲ್ಲಿ ಪ್ರಸನ್ನ ಅವರ ನಾಟಕಗಳು ಸ್ವಾತಂತ್ರ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಘಟ್ಟಗಳಲ್ಲಿನ ಹೊರ ವಸಾಹತುಶಾಹಿ ಮತ್ತು ಒಳ ವಸಾಹತುಶಾಹಿ ಶಕ್ತಿಗಳು ತನ್ನ ನಿಯಂತ್ರಣಕ್ಕೊಳಪಟ್ಟ ಜನಸಮುದಾಯದ ನೇರ ಹಾಗೂ ಸುಪ್ತ ಪ್ರತಿಭಟನೆಯ ವಿವಿಧ ಮುಖಗಳನ್ನು ವಿವಿಧ ಆಯಾಮಗಳಲ್ಲಿ ಚರ್ಚಿಸುತ್ತವೆ. ಪಾರಂಪರಿಕ ಮೌಲ್ಯಗಳ ಹೆಸರಿನಲ್ಲಿ ರಾಜಕಾರಣ ಮಾಡುವವರನ್ನು, ಆ ಮೂಲಕ ಶಕ್ತಿರಾಜಕಾರಣಗಳನ್ನು ಸ್ಥಾಪಿಸಿದ ಯಾಜಮಾನ್ಯದ ನೆಲೆಗಳನ್ನು ಇವರ ನಾಟಕಗಳು ಪರಿಶೋಧಿಸುತ್ತವೆ.

## ಪರಾಮರ್ಶನ ಗ್ರಂಥಗಳು


೧. ಅಸ್ತಿತ್ವವಾದ: ಮೂಲ : ಮೀರಾ ಚಕ್ರವರ್ತಿ :ಅನು : ಬಿ.ವೈ. ಲಲಿತಾಂಬ : ಪ್ರಸಾರಾಂಗ : : :ಬೆಂಗಳೂರು ವಿಶ್ವವಿದ್ಯಾಲಯ, ೧೯೭೯

೨. ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯತೆ, ಹಾಗೂ ಅಧಿಕಾರಕೇಂದ್ರಗಳ ಪ್ರತಿನಿಧೀಕರಣ : ಪಿಹೆಚ್.ಡಿ ಮಹಾಪ್ರಬಂಧ : ಟಿ.ವೆಂಕಟೇಶಮೂರ್ತಿ : ೨೦೦೫,

೩. ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ : ನಟರಾಜ್ ಹುಳಿಯಾರ್ : ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪,

೪. ಉಲಿ : ಪ್ರಸನ್ನ : ಅನನ್ಯ ಪ್ರಕಾಶನ : ೧೯೯೭

೫. ಎಡ್ವರ್ಡ್ ಸೈದ್ ಆಂಡ್ ದಿ ರೀಡಿಂಗ್ ಆಫ್ ಹಿಸ್ಟರಿ : ಶೆಲ್ಲಿವಾಲಿಯ : ಐಕಾನ್ ಬುಕ್ : ೨೦೦೧

೬. ಎಡ್ವರ್ಡ್ ಸೈದ್ : ಸಿ.ಎನ್.ರಾಮಚಂದ್ರನ್ : ಕನ್ನಡ ಪುಸ್ತಕ ಪ್ರಾದಿಕಾರ :೨೦೦೩,

೭. ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ : ಪ್ರಸಂ.: ಬರಗೂರು ರಾಮಚಂದ್ರಪ್ಪ : ಕರ್ನಾಟಕ ಸಾಹಿತ್ಯ ಅಕಾಡೆಮಿ: ೧೯೯೩

೮. ಜಂಗಮದ ಬದುಕು : ಪ್ರಸನ್ನ : ಒಂಟಿದನಿ ಪ್ರಕಾಶನ : ೨೦೦೦

೯. ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ : ೨೦೦೧

೧೦. ಪ್ರಸನ್ನ : ಡಾ. ಹೇಮಾ ಪಟ್ಟಣಶೆಟ್ಟಿ : ಕರ್ನಾಟಕ ನಾಟಕ ಅಕಾಡೆಮಿ : ೨೦೦೦

೧೧. ಬಂಡಾಯ ದಲಿತ ಸಾಹಿತ್ಯ : ಡಾ. ಪುರುಷೋತ್ತಮ ಬಿಳಿಮನೆ : ಕರ್ನಾಟಕ ಸಾಹಿತ್ಯ ಅಕಾಡೆಮಿ: ೨೦೦೫

೧೨. ತದ್ರೂಪಿ : ಪ್ರಸನ್ನ : ಪ್ರಸ್ತಾವನೆ : ಹೇಮಾ ಪಟ್ಟಣಶೆಟ್ಟಿ : ೨೦೦೦

೧೩. ದಕ್ಷಿಣ ಭಾರತದ:(ವಸಾಹತುಶಾಹಿ, ರಾಷ್ಟ್ರೀತತೆ ಮತ್ತು ಸಂಘರ್ಷ): ಡಾ.ಎಸ್.ಚಂದ್ರಶೇಖರ್ ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦,

೧೪. ದೇಸಿ ಜೀವನ ಪದ್ಧತಿ : ಪ್ರಸನ್ನ : ಒಂಟಿದನಿ ಪ್ರಕಾಶನ : ೨೦೦೫,ಪ್ರಸನ್ನರ ನಾಲ್ಕು ನಾಟಕಗಳು : ಪ್ರಸನ್ನ : ಅನನ್ಯ ಪ್ರಕಾಶನ, ೨೦೦೧

೧೫. ಧರ್ಮ ಮತ್ತು ವೈಚಾರಿಕತೆ : ಬಿ.ವಿ.ವೀರಭದ್ರಪ್ಪ : ನವ ಕರ್ನಾಟಕ ಪ್ರಕಾಶನ : ೨೦೦೧

೧೬. ಧರ್ಮ : : ವಿಶ್ವಕೋಶ : ಕನ್ನಡ ವಿಶ್ವವಿದ್ಯಾಲಯ : ಪ್ರಸಾರಾಂಗ : ೨೦೦೦

೧೭. ನಟನೆಯ ಪಾಠಗಳು : ಪ್ರಸನ್ನ : ಕನ್ನಡ ಪುಸ್ತಕ ಪ್ರಾಧಿಕಾರ : ೨೦೦೭

೧೮. ರಾಜಕೀಯ ಚಿಂತಕರು, ವಿದ್ಯಮಾನಗಳು ಮತ್ತು ವಿಧಾನಗಳು : ಎಮ್.ಎನ್.ಸುರೇಶ್ ಕುಮಾರ್, ಜಿ.ಆರ್.ಪೂರ್ಣಿಮಾ : ಸ್ವಪ್ನ ಬುಕ್ ಹೌಸ್ : ೨೦೦೫

೧೯. ಸ್ತ್ರೀವಾದ : ಡಾ.ಬಿ.ಎನ್.ಸುವಿತ್ರಾಬಾಯಿ : ನವ ಕರ್ನಾಟಕ ಪ್ರಕಾಶನ : ೧೯೯೯

೨೦. ವಸಾಹತೋತ್ತರ ಚಿಂತನೆ : ಸಿ.ಎನ್.ರಾಮಚಂದ್ರನ್ : ಕನ್ನಡ ಪುಸ್ತಕ ಪ್ರಾದಿಕಾರ: ೨೦೦೩,

೨೧. ಸಾಹಿತ್ಯ ಕಥನ : ಡಿ.ಆರ್.ನಾಗರಾಜ್ : ಅಕ್ಷರ ಪ್ರಕಾಶನ : ೧೯೯೬,

೨೨. ಸಂಸ್ಕೃತಿ : ಶ್ರಮ ಮತ್ತು ಸೃಜನಶೀಲತೆ : ಸರ್ವಾಧಿಕಾರದ ಮತ್ತು ಸಂವೇಧನಾಶೀಲತೆ : ಬರಗೂರು ರಾಮಚಂದ್ರಪ್ಪ : ಅಂಕಿತ ಪ್ರಕಾಶನ : ೨೦೦೧ : ೨೦೮, ೨೦೯